KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೮, ೨೦೦೬ (ಜೇಷ್ಠ ೧೮ , ಶಕ ವರ್ಷ ೧೯೨೮) | ಸಂಚಿಕೆ ೨೩ |
|---|---|---|


## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 10/05-06, ದಿನಾಂಕ: 16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಫಿರ್ಯಾದುದಾರರು** : ವಲಯ ಅರಣ್ಯಾಧಿಕಾರಿ
ಶಿಕಾರಿಪುರ ವಲಯ

**ಆರೋಪಿಗಳು** : 1) ಆನಂದ ಬಿನ್ ಮರಿಯಪ್ಪ, ಕುಮ್ಮನೂರು
42 ವರ್ಷ, ಶಿಕಾರಿಪುರ ತಾಲ್ಲೂಕು, ಮಲ್ಲಾಪುರ ಗ್ರಾಮವಾಸಿ

**ಬಾದ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:-**

ದಿ: 19-8-2005ರಂದು ರಾತ್ರಿ ಸುಮಾರು 10-00ಗಂಟೆಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಯವರೊಂದಿಗೆ ಶಿಕಾರಿಪುರ ಆನಂದಪುರಂ ರಸ್ತೆಯಲ್ಲಿ ಕಾಳೇನಹಳ್ಳಿ ಕ್ರಾಸ್‌ಬಳಿ ಕಾಯುತ್ತಿರುವಾಗ ದಿ: 20-08-2005ರಂದು ಬೆಳಗ್ಗಿನ ಜಾವ 5-30ರ ಸಮಯದಲ್ಲಿ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ವಾಹನ ಚಾಲಕ ಸುಮಾರು 30 ಅಡಿ ದೂರದಲ್ಲಿ ನಿಲ್ಲಿಸಿ ವಾಹನ ಬಿಳಿಸಿ ಓಡಲು ಪ್ರಾರಂಭಿಸಿದಾಗ ಅವನನ್ನು ಇಲಾಖೆಯವರು ಬೆನ್ನಟ್ಟಿ ಅಸಾಮಿಯನ್ನು ಹಿಡಿದು ವಾಹನ ಪರಿಶೀಲಿಸಲಾಗಿ ವಾಹನದ ಹಿಂಭಾಗದಲ್ಲಿ ಬೀಟೆ ಸೈಜ್ 06=0.044ಎಂ3 ಇದ್ದು, ಇದನ್ನು ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದ ಮೇರೆಗೆ ಮತ್ತು ಈ ಸೈಜುಗಳು ಗರಗಸದಿಂದ ಕೊಯ್ತು ಮಾಡಿದಾಗಿದ್ದು, ಹಸಿಯಾದ ಸೈಜುಗಳಾಗಿರುತ್ತದೆ. ಆದ್ದರಿಂದ ಇದು ಅಕ್ರಮ ಸಾಗಾಣಿಕೆಯೆಂದು ಪರಿಗಣಿಸಿ ವಾಹನ ಬಜಾಜ್ ಎಂ-80-ನಂ MEP-8346 ಮತ್ತು ಅರಣ್ಯ ಉತ್ಪನ್ನ ಮತ್ತು ಅಸಾಮಿಯನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 50(ಕೆ)(ಬಿ) 104(ಎ), 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 27/05-06 ದಿ: 20-8-2005ರಂದು ದಾಖಲಿಸಿ ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ಈ ವಾಹನದ ನೋಂದಣಿ ಮಾಲೀಕರ ಬಗ್ಗೆ ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ ಗುಲ್ಬರ್ಗ ಇವರಿಗೆ ದಿ: 06–10–2005 ಮತ್ತು 14–12–2005ರಂದು ಪತ್ರ ಬರೆದು ಈ ವಾಹನ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಲು ಕೋರಲಾಗಿತ್ತು. ಆದರೆ ಅವರಿಂದ ಇಲ್ಲಿಯವರೆವಿಗೂ ಯಾವುದೇ ಮಾಹಿತಿ ಬಂದಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 27–09–2005ರಂದು 30(ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯೂ ದಿ: 09–10–2005ರಂದು ಉದಯವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ–80 MEP-8346 ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 6=0.044ಎಂ3ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 705

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 11/05–06, ದಿನಾಂಕ: 16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಶಿಕಾರಿಪುರ.

**ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 23–08–05ರಂದು ವಲಯ ಅರಣ್ಯಾಧಿಕಾರಿ ಶಿಕಾರಿಪುರ ಮತ್ತು ಸಿಬ್ಬಂದಿಯವರು ಮತ್ತು ಅರಣ್ಯ ಸಂಚಾರಿ ದಳದ ಸಿಬ್ಬಂದಿಯವರು ರಾತ್ರಿ ಸುಮಾರು 9.00ಗಂಟೆ ಸಮಯದಲ್ಲಿ ಶಿಕಾರಿಪುರದಿಂದ ಶಿವಮೊಗ್ಗಕ್ಕೆ ಹೋಗುವ ಪಿಡಬ್ಲ್ಯೂಡಿ ರಸ್ತೆಯಲ್ಲಿ ಅಂಜನಾಪುರ ಚಾನಲ್ ಸೇತುವೆ ಬಳಿ ಕಾಯುತ್ತಿರುವಾಗ ಶಿಕಾರಿಪುರದ ಕಡೆ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರು ನಿಲ್ಲಿಸದೇ ವಾಹನ ವೇಗವಾಗಿ ಚಾನಲ್ ಕೇರಿಯಲ್ಲಿ ದಾವಿಸಿತು. ಅನುಮಾನದಿಂದ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಸುಮಾರು 1 ಕಿ.ಮೀ.ದೂರ ಚಲಿಸಿ, ಶ್ರೀ ರಾಘವೇಂದ್ರ ಮಠದಿಂದ ಶ್ರೀ ದತ್ತ ಮಠಕ್ಕೆ ಹೋಗುವ ರಸ್ತೆಯಲ್ಲಿ ಸಾಗಿ ಪುನಃ ಚಾನಲ್ ಕೇರಿಯ ಹತ್ತಿರ ಬರುವಾಗ ಜೀಪು ಸಿಎನ್‌ಬಿ 6481 ನಿಲ್ಲಿಸಿ ಆಸಾಮಿಗಳು ಪರಾರಿಯಾಗಿದ್ದು ಬೆನ್ನಟ್ಟಿದಾಗ ಚಾಲಕನು ಒಬ್ಬ ಸಿಬ್ಬಂದಿ ಮೇಲೆ ಕಬ್ಬಿಣದ ರಾಡಿನಿಂದ ಹೊಡೆದಾಗ ಸಿಬ್ಬಂದಿಗಳು ನಿಂತ ಕಾರಣ ಕತ್ತಲೆಯಲ್ಲಿ ಪರಾರಿಯಾದರು. ಅದರಲ್ಲಿ ಸಾಗುವಾನಿ ಸೈಜ್ 10=0.077ಎಂ3, ಬೀಟೆ ಸೈಜ್ 8=0.098ಎಂ3 ಇತ್ತು. ಅವುಗಳ ತುದಿ ಬುಡ ಕೊಡಲಿ ಗರಗಸದಿಂದ ಕೊಯ್ತು ಮಾಡಿದ್ದಾಗಿದ್ದು, ಈ ಸೈಜುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ, ಗುರುತಾಗಲೀ ಇರಲಿಲ್ಲ. ಅಲ್ಲದೇ

ಇವುಗಳನ್ನು ಸಾಗಿಸಲು ರಹದಾರಿ ಇಲ್ಲವೆಂದು ಮತ್ತು ಇದು ಅಕ್ರಮ ಸಾಗಾಣಿಕೆಯೆಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತು ಮಾಡಿ, ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 50(ಬಿ), 24, 71(ಎ), 104(ಎ), 80 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ 29/05–06ನ್ನು ದಾಖಲಿಸಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಬಗ್ಗೆ ಬಿ ಎಕ್ಸ್‌ಟ್ರಾಕ್ಟ್‌ನ್ನು ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ಇವರಿಗೆ ದಿ:06–10–05ರಂದು ಪತ್ರ ಬರೆದು ಕೋರಲಾಯಿತು. ಅದರಂತೆ ದಿ:03–11–05 ರಂದು ಈ ನ್ಯಾಯಾಲಯಕ್ಕೆ ಬಿ ಪ್ರತಿ ಕಳುಹಿಸಿಕೊಟ್ಟಿರುತ್ತಾರೆ. ಈ ವಾಹನ The Zonal manager, State Bank of Mysore, Zonal Office, Hubli, Dt.Dharwad ಎಂದು ಮತ್ತು ಸಿ.ಸಿ.ಯನ್ನು ದಿ: 03–02–89ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗಕ್ಕೆ ಕೊಟ್ಟಿರುವ ಬಗ್ಗೆ ತಿಳಿಸಿರುತ್ತಾರೆ.

ದಿ: 08–11–05ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗರವರಿಗೆ ಪತ್ರ ಬರೆದು ಈಗ ಈ ವಾಹನ ಯಾರ ಹೆಸರಿಗೆ ನೊಂದಣಿಯಾಗಿದೆ ಎಂಬ ಬಗ್ಗೆ ಬಿ ಎಕ್ಸ್‌ಟ್ರಾಕ್ಟ್ ಒದಗಿಸಲು ಕೋರಲಾಯಿತು. ಆದರೆ ಇಲ್ಲಿಯವರೆವಿಗೂ ಅವರಿಂದ ಯಾವುದೇ ಮಾಹಿತಿ ಈ ನ್ಯಾಯಾಲಯಕ್ಕೆ ಬಂದಿರುವುದಿಲ್ಲ. ಹಾಗೂ ವಾಹನದಲ್ಲಿ ದೊರೆತ ಈ ವಾಹನದ ಆರ್.ಸಿ.ಪುಸ್ತಕದ ಜೆರಾಕ್ಸ್ ಪ್ರತಿಯಂತೆ ಶ್ರೀ ರಹೀಮ್ ಖಾನ್ ಬಿನ್ ಕಲಂದರ್ ಖಾನ್, ಜೆ.ಪಿ.ನಗರ, ಶಿವಮೊಗ್ಗ ಟೌನ್ ಇವರಿಗೆ ದಿ: 24–12–05ರಲ್ಲಿ ನೊಂದಣಿ ಅಂಚೆ ಮೂಲಕ ಕಾರಣ ಕೇಳಿ ಪತ್ರ ಜಾರಿ ಮಾಡಿದ್ದು ಅವರಿಂದ ಇಲಾಖೆಯವರಿಗೆ ಯಾವುದೇ ಲಿಖಿತ ಹೇಳಿಕೆಯಾಗಲೀ, ಈ ವಾಹನದ ಮೂಲ ದಾಖಲೆಗಳಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಬಿಟ್ಟುಕೊಡಲು ಕೋರಿರುವುದಿಲ್ಲ. ಅಲ್ಲದೇ ಧಾರವಾಡ ಪ್ರಾದೇಶಿಕ ಸಾರಿಗೆ ಅಧಿಕಾರಿ ನೀಡಿದ 'ಬಿ'ವಹಿಯಂತೆ ಜೋನಲ್ ಮ್ಯಾನೇಜರಿಗೆ ದಿ: 20–02–06ರಂದು ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿ 15 ದಿನದೊಳಗೆ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸದೇಹೋದಲ್ಲಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ತಿಳಿಸಲಾಗಿತ್ತು. ಇವರು ಸಹಾ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ವಾಹನ ಬಿಟ್ಟುಕೊಡುವ ಬಗ್ಗೆ ವಾಹನದ ಮೂಲ ದಾಖಲೆಗಳನ್ನು ಸಲ್ಲಿಸಿ ಕಾನೂನುಬದ್ಧವಾಗಿ ಕೋರಿರುವುದಿಲ್ಲ.

ಅಲ್ಲದೇ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ದಿ: 27–09–2005ರಂದು ಪ್ರಕಟಣೆ ಹೊರಡಿಸಿ ಪ್ರತಿಯನ್ನು ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ ಇವರಿಗೆ ಕಳುಹಿಸಿ ಕೋರಲಾಗಿದೆ. ಅದರಂತೆ ಈ ಪ್ರಕಟಣೆಯು ದಿ: 09–10–05ರಂದು ಉದಯವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಣೆ ಪ್ರಕಟಗೊಂಡು 30 ದಿನಗಳು ಕಳೆದರೂ ಯಾರೂ ಈ ನ್ಯಾಯಾಲಯಕ್ಕೆ ಹಾಜರಾಗಿ ಈ ವಾಹನದ ದಾಖಲೆಗಳೊಂದಿಗೆ ವಾಹನ ಬಿಟ್ಟುಕೊಡಿ ಎಂದು ಅರ್ಜಿ ಸಲ್ಲಿಸಿ ಕೋರಿರುವುದಿಲ್ಲ. ಇದರಿಂದ ಈ ವಾಹನವನ್ನು ವಾಹನ ಮಾಲೀಕರು ಅರಣ್ಯ ಉತ್ಪನ್ನವನ್ನು ಸಾಗಿಸಲು ಉಪಯೋಗಿಸಿಲ್ಲವೆಂದು ಸಾಬೀತುಪಡಿಸಲು ವಾಹನ ಮಾಲೀಕರು ಸಂಪೂರ್ಣ ವಿಫಲರಾಗಿದ್ದಾರೆ. ಆದ್ದರಿಂದ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ದಾಖಲೆಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಜೀಪು ಸಿಎನ್‌ಬಿ–6481ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ, ಸಾಗುವಾನಿ ಸೈಜ್ 18=0.077ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 702

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 11/05-06, ದಿ: 16ನೇ ಮಾರ್ಚ್ 2006**

| | | |
|---|---|---|
| **ಉಪಸ್ಥಿತರು** | : | ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ |
| **ಪಿರ್ಯಾದುದಾರರು** | : | ವಲಯ ಅರಣ್ಯಾಧಿಕಾರಿ<br>ಹೊಸನಗರ ವಲಯ |
| **ಆರೋಪಿಗಳು** | : | 1) ಶಫಿ ಬಿನ್ ಇಮಾಮ್‌ಸಾಬ್, 35 ವರ್ಷ,<br>ಚರ್ಚ್ ರಸ್ತೆ , ಹೊಸನಗರ ಟೌನ್<br>2) ಬೋಜಕುಲಾಲ್ ಬಿನ್ ಬಸವಕುಲಾಲ್, 38 ವರ್ಷ,<br>ಹೊನ್ನೆಕೊಪ್ಪ ವಾಸಿ, ಭೀಮನಕೆರೆ ಅಂಚೆ, ಹೊಸನಗರ ತಾ!! |
| **ಬಾಧ್ಯತೆದಾರರು** | : | ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:-**

ದಿ: 26-8-2005 ಹೊಸನಗರ ವಲಯದ ಕಸಬಾ ಮತ್ತು ರಿಪ್ಪನ್‌ಪೇಟೆ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ವರ್ತಮಾನದ ಮೇರೆಗೆ ಹೊಸನಗರದಿಂದ ದುಮ್ಮಕ್ಕೆ ಹೋಗುವ ರಸ್ತೆಯ ಎಡಭಾಗದಲ್ಲಿರುವ ಮಸಗಲ್ಲಿ ಹಿರಿಯ ಪ್ರಾಥಮಿಕ ಶಾಲೆಯ ಹತ್ತಿರದಲ್ಲಿರುವ ನೀರಿನ ಟ್ಯಾಂಕ್ ಹತ್ತಿರ ರಾತ್ರಿ ಕಾಯುತ್ತಿರುವಾಗ ರಾತ್ರಿ 1 ಗಂಟೆ ಸಮಯದಲ್ಲಿ ದುಮ್ಮ ಕಡೆಯಿಂದ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಕಂಡು ಟಾರ್ಚ್ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸಿದ ಕೂಡಲೇ ಇಲಾಖೆಯವರು ಸುತ್ತುವರಿದು ವಾಹನದಲ್ಲಿದ್ದ ಅಸಾಮಿಗಳನು ಹಿಡಿದು ನಿಲ್ಲಿಸಿ ನೋಡಲಾಗಿ ಬಜಾಜ್ ಎಂ-80, ಕೆಎ-18-ಎ-3038 ಇಂಜಿನ್ ನಂ. E16DG15-5344, ಛಾಸ್ಸಿಸ್ ನಂ. 16DG-155292 ಆಗಿದ್ದು, ವಾಹನದ ಹಿಂದಗಡೆ ಕೂತವನ ಕೈಯಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧದ 4 ತುಂಡು ಮತ್ತು ಚೆಕ್ಕೆ ಇದ್ದು ಒಟ್ಟು 12 ಕೆ.ಜಿ. ಇದ್ದು, ಇವುಗಳ ಪರಿಮಳ ವಾಸನೆಯಿಂದ ಮತ್ತು ಬಣ್ಣದಿಂದ ಶ್ರೀಗಂಧವೆಂದು ತಿಳಿದು ಬಂದಿರುತ್ತದೆ. ಇವುಗಳನ್ನು ಸಾಗಿಸಲು ರಹದಾರಿ ಇಲ್ಲವೆಂದು ಮತ್ತು ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಾಗಲೀ ಇರಲಿಲ್ಲವಾದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಶ್ರೀಗಂಧ ಮತ್ತು ಅಸಾಮಿಗಳಾದ (1) ಶಫಿ ಬಿನ್ ಇಮಾಮ್‌ಸಾಬ್, 35 ವರ್ಷ, ಚರ್ಚ್ ರಸ್ತೆ, ಹೊಸನಗರ ಟೌನ್, (2) ಬೋಜಕುಲಾಲ್ ಬಿನ್ ಬಸವಕುಲಾಲ್ 38 ವರ್ಷ, ಹೊನ್ನೆಕೊಪ್ಪವಾಸಿ, ಭೀಮನಕೆರೆ ಅಂಚೆ, ಹೊಸನಗರ ತಾಲ್ಲೂಕು ಇವರನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 84, 86, 87, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ 32/05-06 ದಿ: 26-8-2005ರಂದು ದಾಖಲಿಸಿ ಆರೋಪಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಲು ಚಿಕ್ಕಮಗಳೂರು ಇವರಿಗೆ ನ್ಯಾಯಾಲಯದ ಪತ್ರ ಸಂಖ್ಯೆ ಅಮೊ.ವಾಹನ.12/05-06 ದಿ: 6-10-2005ರಂದು ಬರೆದು ಕೋರಲಾಗಿತ್ತು. ಅದರಂತೆ ದಿ: 17-10-2005ರಲ್ಲಿ ಬಿ ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರು ಒದಗಿಸಿರುತ್ತಾರೆ. ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿನ ಈ ವಾಹನವು ಶ್ರೀ ಹೆಚ್.ಪಿ. ರೇವಣಸಿದ್ದಪ್ಪ ಬಿನ್ ಹೆಚ್.ಆರ್. ಪರ್ವತಪ್ಪ, ಹೊಟ್ಟೆನಹಳ್ಳಿ ಗ್ರಾಮ, ಕಡೂರು ತಾಲ್ಲೂಕು ಇವರಿಗೆ ದಿ: 23-11-2005ರಲ್ಲಿ ಕಾರಣಕೇಳಿ ಪತ್ರ ಜಾರಿಮಾಡಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವುದಕ್ಕೆ ನಿಮ್ಮ ತಕರಾರು ಇದ್ದಲ್ಲಿ ಈ ಪತ್ರ ತಲುಪಿದ 15 ದಿನದೊಳಗಾಗಿ ಈ ನ್ಯಾಯಾಲಯಕ್ಕೆ ಹಾಜರಾಗಿ ದಾಖಲೆಗಳೊಂದಿಗೆ ಲಿಖಿತ ಹೇಳಿಕೆ ಸಲ್ಲಿಸಲು ತಿಳಿಸಲಾಗಿತ್ತು. ಇಲ್ಲಿಯವರೆವಿಗು ಇವರು ಯಾವುದೇ ತಕರಾರು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 27-09-2005ರಂದು 30(ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ

ಪ್ರಕಟಣೆಯೂ ದಿ: 09–10–2005ರಂದು ಉದಯವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೇಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ–80 ಕೆಎ–18–ಎ–3038 ಚಾಸಿಸ್ ನಂ CI16DG-155292, ಇಂಜಿನ್ ನಂ. E16DG-155344ನ್ನು ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ತುಂಡು ಮತ್ತು ಸಣ್ಣಸಣ್ಣ ಚಕ್ಕೆ ಸೇರಿದಂತೆ 12 ಕೆ.ಜಿಯನ್ನು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 703

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 14/05–06, ದಿ: 16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಫಿರ್ಯಾದುದಾರರು** : ವಲಯ ಅರಣ್ಯಾಧಿಕಾರಿ
ಹೊಸನಗರ ವಲಯ

**ಆರೋಪಿಗಳು** : 1) ಕುಮಾರ್ ಬಿನ್ ಈರಪ್ಪ ನಾಯಕ್ 30 ವರ್ಷ
ಅಲಗಾರುವಾಸಿ, ಸೊನಲೆ ಅಂಚೆ, ಹೊಸನಗರ ತಾಲ್ಲೂಕು

**ಬಾಧ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 21–9–2005 ವಲಯ ಅರಣ್ಯಾಧಿಕಾರಿ, ಹೊಸನಗರ ಮತ್ತು ಸಿಬ್ಬಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ಹುಂಚಾ ಹೋಬಳಿ ಸಾಂತೂರು ಗ್ರಾಮ ಮುಂಬಾರುನಿಂದ ಬಿಲ್ಲೇಶ್ವರಕ್ಕೆ ಹೋಗುವ PWD ರಸ್ತೆಯ ಎಂ.ಪಿ.ಎಂ. ನೆಡುತೋಪಿನ ಕೊಳಗಿ ಮೀಸಲು ಅರಣ್ಯದಲ್ಲಿನ ಸಾಲಕೋಡಿ ಮುಖ್ಯ ರಸ್ತೆಯಲ್ಲಿ ಕಾಯುತ್ತಿರುವಾಗ ದ್ವಿಚಕ್ರ ವಾಹನ ಬರುತ್ತಿರುವುದನ್ನು ಅನುಮಾನದ ಮೇರೆಗೆ ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರನ್ನು ಚಾಲಕ ನೋಡಿ ಪ್ಲಾಸ್ಟಿಕ್ ಚೀಲ ಸಮೇತ ವಾಹನ ಬಿಟ್ಟು ಓಡಲು ಪ್ರಾರಂಭಿಸಿದನ್ನು ಬೆನ್ನಟ್ಟಿದರು ಕೈಗೆ ಸಿಕ್ಕದೆ ಪರಾರಿಯಾಗಿರುತ್ತಾನೆ. ಇವನ ಹೆಸರು ಶ್ರೀ ಕುಮಾರ್ ಬಿನ್ ಈರಪ್ಪನಾಯಕ್, 30 ವರ್ಷ ಎಂದು ತಿಳಿದು ಬಂದಿರುತ್ತದೆ. ನಂತರ ವಾಹನಲ್ಲಿದ್ದ ಚೀಲ ಬಿಚ್ಚಿ ನೋಡಲಾಗಿ ಒಂದು ಶ್ರೀಗಂಧದ ತುಂಡು ಮತ್ತು ಸಣ್ಣ ಸಣ್ಣ ಚೆಕ್ಕೆಗಳಿದ್ದವು. ಅವುಗಳ ಒಟ್ಟು ತೂಕ 15 ಕೆ.ಜಿ. ಆಗಿರುತ್ತದೆ. ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ, ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಯಮಹಾ ಬೈಕ್ ಕೆಎ–23–ಆರ್–6729, ಚಾಸಿಸ್ ನಂ 0336, ಇಂಜಿನ್ ನಂ. 5KA302435, ಮತ್ತು ಈ ವಾಹನದಲ್ಲಿದ್ದ ಶ್ರೀಗಂಧ 15 ಕೆ.ಜಿ.ನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ಮಾಹಿತಿ ವರದಿ ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 84, 86, 87, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ

45/05-06ನ್ನು ದಾಖಲಿಸಿ ಆರೋಪಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿ, ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ ಚಿಕ್ಕೋಡಿ ಇವರಿಗೆ ದಿ: 27-9-2005ರಲ್ಲಿ ಕೋರಿದಂತೆ ದಿ: 14-10-2005ರಲ್ಲಿ ಈ ವಾಹನ ಬಿ ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿನ ಈ ವಾಹನವು ಶ್ರೀ ಬಾಬುರಾವ್, ವಜಾಜೀ ಚೌದರಿ ಅತಣಿ ತಾಲ್ಲೂಕು ಇವರಿಗೆ ನೋಂದಣಿ ಅಂಚೆ ಮೂಲಕ ಕಾರಣಕೇಳಿ ಪತ್ರ ಜಾರಿ ಮಾಡಿ ವಾಹನ ಮುಟ್ಟುಗೋಲು ಹಾಕಿಕೊಳ್ಳಲು ತಕರಾರು ಇದ್ದಲ್ಲಿ ಈ ಪತ್ರ ತಲುಪಿದ 15 ದಿನದೊಳಗಾಗಿ ಲಿಖಿತ ಹೇಳಿಕೆಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು ತಿಳಿಸಿರುತ್ತದೆ. ಅದರಂತೆ ಈ ನ್ಯಾಯಾಲಯಕ್ಕೆ ದಿ: 13-01-2006ರಂದು ಶ್ರೀ ಬಾಬುರಾವ್‌ರವರು ಪತ್ರ ಬರೆದು ಈ ವಾಹನವನ್ನು ನಾನು ಭಾರತ ಆಟೋ ಮೊಬೈಲ್ ಅಥಣಿಯವರು ಎಕ್ಸೆಂಜ್ ಆಫರ್‌ನಲ್ಲಿ ಈ ವಾಹನ ಈ ಸಂಸ್ಥೆಗೆ ಕೊಟ್ಟು ಬೇರೆ ಹೊಸ ವಾಹನ ಬದಲಾಯಿಸಿಕೊಂಡಿರುತ್ತೇನೆಂದು ಆದ ಕಾರಣ ಈ ವಾಹನದ ಎಲ್ಲಾ ದಾಖಲೆಗಳನ್ನು ಅವರಿಗೆ ಕೊಟ್ಟಿರುತ್ತೇನೆಂದು, ಆದ್ದರಿಂದ ಈ ವಾಹನಕ್ಕೆ ನನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 27-09-2005ರಂದು 30(ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯೂ ದಿ: 09-10-2005ರಂದು ಉದಯವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಜಪ್ತು ಮಾಡಿದ ವಾಹನ ಯಮಹಾ ಬೈಕ್ ಕೆಎ-23-ಆರ್-6729ನ್ನು ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ತುಂಡು ಸಣ್ಣಸಣ್ಣ ಚಕ್ಕೆ 15 ಕೆ.ಜಿಯನ್ನು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16-03-2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 704

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 16/05-06, ದಿ: 16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

| | | |
|---|---|---|
| **ಪಿರ್ಯಾದುದಾರರು** | : | ವಲಯ ಅರಣ್ಯಾಧಿಕಾರಿ<br>ಶಿಕಾರಿಪುರ ವಲಯ |
| ಆರೋಪಿಗಳು | : | ಪತ್ತೆಯಾಗಿರುವುದಿಲ್ಲ. |
| ಬಾದ್ಯತೆದಾರರು | : | ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:-**

ದಿ: 13-10-2005 ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯದ ಕಸಬಾ ಶಾಖೆಯ ಸಿಬ್ಬಂದಿಗಳು ಶಿಕಾರಿಪುರ ಅಂಬ್ಲಿಗೊಳ ರಸ್ತೆಯ ಗಾಮಾ ಕ್ರಾಸ್ ಬಳಿ ರಾತ್ರಿ ಸುಮಾರು 8-00 ಗಂಟೆ ಸಮಯದಲ್ಲಿ ಗಸ್ತು ಕಾಯುತ್ತಿರುವಾಗ ಅಂಬ್ಲಿಗೊಳ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ವಾಹನ ಚಾಲಕ ಇಲಾಖೆಯವರನ್ನು ಕಂಡು ವಾಹನ ಅಲ್ಲೇ ಬೀಳಿಸಿ ಕತ್ತಲೆಯಲ್ಲಿ ಓಡಿ ಕೈಗೆ ಸಿಗದೇ ಪರಾರಿಯಾಗಿರುತ್ತಾನೆ. ನಂತರ ವಾಹನವನ್ನು ಪರಿಶೀಲಿಸಿ ನೋಡಲಾಗಿ ಬಜಾಜ್ ಎಂ-80, CRW-3125, ಛಾಸ್ಸಿಸ್ ನಂ. 16EBEC3745, ಇಂಜಿನ್ ನಂ. 16E059505 ಆಗಿದ್ದು, ವಾಹನದ ಹಿಂಭಾಗದ ಕ್ಯಾರಿಯರ್‌ನಲ್ಲಿ ಬೀಟೆ ಜಾತಿಯ ಪೀಠೋಪಕರಣಕ್ಕಾಗಿ ತಯಾರು ಮಾಡಿದ 3 ಕಾಲುಗಳನ್ನು ದಾರದಿಂದ ಕಟ್ಟಿದ್ದರು ಯಾರೂ ಅಸಾಮಿಗಳು ಪತ್ತೆಯಾಗದ ಕಾರಣ ಮತ್ತು ಇಲಾಖೆಯವರನ್ನು ಕಂಡ ಕೂಡಲೇ ವಾಹನ ಬಿಟ್ಟು ಕತ್ತಲೆಯಲ್ಲಿ ಓಡಿರುವುದರಿಂದ ಅವರನ್ನು ಬೆನ್ನಟ್ಟಿದರು ಕೈಗೆ ಸಿಗದ ಕಾರಣ ಇವರು ರಹದಾರಿ ಇಲ್ಲದೇ ಅಕ್ರಮವಾಗಿ ಬೀಟೆ ಸೈಜ್ 03=0.019ಎಂ3ನ್ನು ವಾಹನದಲ್ಲಿ ಸಾಗಿಸಿರುವುದೆಂದು ಪರಿಗಣಿಸಿ ವಾಹನ, ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 50, 24, 71(ಎ), 104(ಎ), 80 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 43/05-06ನ್ನು ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ಈ ವಾಹನದ ಬಗ್ಗೆ ಬಿ ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದ ಪತ್ರ ಸಂಖ್ಯೆ ಅಮೊ.ವಾಹನ.16/05-06 ದಿ: 03-11-2005ರಲ್ಲಿ ಕೋರಲಾಗಿತ್ತು. ಆದರೆ ಅವರಿಂದ ಯಾವುದೇ ಈ ವಾಹನದ ಮಾಹಿತಿ ಬಂದಿರುವುದಿಲ್ಲ. ಮತ್ತು ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 19-11-2005ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ: 30-11-2005ರಂದು ಉದಯವಾಣಿ ದಿನಪತ್ರಿಕೆಯಲ್ಲಿ ದಿ: 5-1-2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ಬಜಾಜ್ ಎಂ-80, CRW-3125, ಛಾಸ್ಸಿಸ್ ನಂ. 16EBEC3745, ಇಂಜಿನ್ ನಂ. 16E059505 ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 3=0.019ಘ.ಮೀ. ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16-03-2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 706

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 18/05–06, ದಿನಾಂಕ:16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಫಿರ್ಯಾಧಿದಾರರು** : ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ.

**ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 30–10–2005ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಶಿಕಾರಿಪುರ ಟೌನ್ ವ್ಯಾಪ್ತಿಯ ಮಾಸೂರಿನಿಂದ ಹಳೆಯ ಹೊನ್ನಾಳಿ ರಸ್ತೆಯ ಪಿಡಬ್ಲ್ಯೂಡಿ ಸರ್ಕಾರಿ ಜಾಗದಲ್ಲಿ ಗಸ್ತು ಮಾಡುತ್ತಿರುವಾಗ ಶಿಕಾರಿಪುರ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರೂ ನಿಲ್ಲಿಸದೆ ಇಲಾಖೆಯವರನ್ನು ನೋಡಿ ಮಾಸೂರು ರಸ್ತೆ, ಚನ್ನಹಳ್ಳಿ ಕ್ರಾಸ್‌ನಿಂದ ವಾಪಾಸ್ ತಿರುಗಿಸಿ ವಾಹನ ಓಡಿಸಲು ಪ್ರಾರಂಭಿಸಿದಾಗ ಇಲಾಖಾ ವಾಹನ ಜೀಪು ಕೆಎ–14, ಜಿ–463ರಲ್ಲಿ ಬೆನ್ನಟ್ಟಿ ಮೇಲ್ಕಂಡ ಸ್ಥಳದಲ್ಲಿ ನಿಲ್ಲಿಸಿ, ವಾಹನದಲ್ಲಿದ್ದ ವ್ಯಕ್ತಿಗಳು ಓಡಲು ಪ್ರಾರಂಭಿಸಿದಾಗ ಇಲಾಖೆಯವರು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ ಹಸಿರು ಬಣ್ಣದ ಜೀಪು ಜಿಎಇ–9752, ಛಾಸ್ಸಿ ನಂ: HTD-355051 ಮತ್ತು ಇಂಜಿನ್ ನಂ: ODF 50667 ಆಗಿದ್ದು, ಜೀಪಿನ ಒಳಭಾಗದ ಸೀಟ್ ಅಡಿಯಲ್ಲಿ ಟರ್ನಿಂಗ್ ಮಾಡಿದ ಬೀಟೆ ಸೈಜ್, ಟೀಪಾಯಿ, ಕುರ್ಚಿ, ಸೋಪಾಸೆಟ್, ಟೇಬಲ್, ಬಿಡಿಭಾಗಗಳಾಗಿದ್ದು, ಇವುಗಳನ್ನು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ, ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 2, 24, 50, 62, 80, 104ಎ, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 163, 165 ಉಲ್ಲಂಘನೆಯಾದ ಮೇರೆಗೆ ಅರಣ್ಯ ಸಂಚಾರಿ ದಳ, ಶಿಕಾರಿಪುರ ಕಛೇರಿ ಅರಣ್ಯ ಮೊಕದ್ದಮೆ ಸಂಖ್ಯೆ: 45/05–06 ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ವಾಹನದಲ್ಲಿ ದೊರೆತ ಆರ್.ಸಿ.ಜೆರಾಕ್ಸ್ ಪ್ರತಿಯಂತೆ ಶ್ರೀ ಮೊಹಮದ್ ಖಾದಿರ್ ಬಿನ್ ಮೊಹಮದ್ ಷಪಿ, ಮನೆ ನಂ:22, ಹೆಚ್.ಸಿದ್ದಯ್ಯ ರಸ್ತೆ, ಬೆಂಗಳೂರು ಇವರಿಗೆ ಕಾರಣ ಕೇಳಿ ಪತ್ರವನ್ನು ದಿ:23–11–05ರಂದು ಜಾರಿಮಾಡಿ 15 ದಿನದೊಳಗಾಗಿ ವಾಹನದ ಮೂಲ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ವಾಹನ ಬಿಡಿಸಿಕೊಳ್ಳಲು ಅರ್ಜಿ ಸಲ್ಲಿಸದೇ ಹೋದಲ್ಲಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ತಿಳಿಸಲಾಗಿದೆ. ಇವರಿಂದ ಯಾವುದೇ ಅರ್ಜಿಯು ಈ ನ್ಯಾಯಾಲಯಕ್ಕೆ ಬಂದಿರುವುದಿಲ್ಲ.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 19–11–05ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ: 30–11–05ರಂದು ಉದಯವಾಣಿ ಮತ್ತು ದಿ: 05–1–2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲ ವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ

ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಜೀಪು ಸಿಎಇ–9752, ಛಾಸ್ಸಿ ನಂ: HTD–355051 ಮತ್ತು ಇಂಜಿನ್ ನಂ: ODF 50667 ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 94=0.220ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 707 ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 19/05–06, ದಿನಾಂಕ: 16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಆನವಟ್ಟಿ ವಲಯ, ಆನವಟ್ಟಿ.

**ಆರೋಪಿಗಳು** : ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 03–11–2005ರಂದು ವಲಯ ಅರಣ್ಯಾಧಿಕಾರಿ ಆನವಟ್ಟಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ, ಆನವಟ್ಟಿ ಗ್ರಾಮದ ಆಜಾದ್ ಬೀದಿ, ಆನವಟ್ಟಿಯಿಂದ ಕೋಟೆ ಪುರಕ್ಕೆ ಹೋಗುವ ಮುಖ್ಯ ರಸ್ತೆಯ ಬಲಭಾಗದಲ್ಲಿರುವ ಹೊಂಡದ ಕೇರಿಗೆ ಹೋಗುವ ಕಾಲುದಾರಿಯಲ್ಲಿ ಹೋಗುವಾಗ ಒಬ್ಬ ಅಸಾಮಿಯು ದ್ವಿಚಕ್ರ ವಾಹನದಲ್ಲಿ ಹೋಗುವುದನ್ನು ಅನುಮಾನದಿಂದ ಇಲಾಖಾ ಜೀಪಿನಿಂದ ಇಳಿದು ಹೋಗುವಷ್ಟರಲ್ಲಿ ಆತನು ಸ್ಥಳದಲ್ಲಿ ವಾಹನ ಬಿಟ್ಟು ಓಡಿ ಹೋದನು. ಬೆನ್ನಟ್ಟಿದರೂ ಕೈಗೆ ಸಿಕ್ಕಿರುವುದಿಲ್ಲ. ಓಡಿ ಹೋದವನು ಯಾರು ಎಂದು ತಿಳಿದುಬಂದಿರುವುದಿಲ್ಲ. ವಾಹನದ ಮುಂಭಾಗದ ಸೀಟಿನ ಕೆಳಗಡೆ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧದ ತುಂಡುಗಳು ಇದ್ದು ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾ, ಗುರುತು ಇರುವುದಿಲ್ಲ ಮತ್ತು ಇದನ್ನು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇವುಗಳು ಒರಟು ಕೆತ್ತನೆಯಿಂದ ಕೂಡಿದ್ದು ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಬಜಾಜ್ ಎಂ–80 ಕೆಎ–31, ಇ–4392ನ್ನು, ಈ ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಎ, 86, 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಸೆಕ್ಷನ್ 84ರ ಪ್ರಕಾರ ಆನವಟ್ಟಿ ವಲಯ ಕಛೇರಿ ಅ.ಮೊ. ಸಂಖ್ಯೆ 99/05–06 ದಿ:03–11–05ನ್ನು ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನ ಯಾರ ಹೆಸರಿಗೆ ನೊಂದಣೆಯಾಗಿದೆ ಎಂಬುದರ ಬಗ್ಗೆ ಬಿ ಎಕ್ಸ್‌ಟ್ರಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿರಸಿ ಇವರಿಗೆ ಈ ಕಛೇರಿ ಪತ್ರ ಸಂಖ್ಯೆ:ಅಮೊ:ವಾಹನ:19/05–06 ದಿ: 06–12–2005ರಲ್ಲಿ ಕೋರಿರುತ್ತದೆ. ಆದರೆ ಅವರಿಂದ ಯಾವುದೇ ಮಾಹಿತಿ ಈ ನ್ಯಾಯಾಲಯಕ್ಕೆ ಇಲ್ಲಿಯವರೆವಿಗೂ ಒದಗಿರುವುದಿಲ್ಲ. ಆದ್ದರಿಂದ ಈ ವಾಹನ ಮಾಲೀಕರಿಗೆ 71ಬಿ (1)ರ ಪ್ರಕಾರ ನೋಟೀಸು ಕೊಟ್ಟಿರುವುದಿಲ್ಲ. ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಯಿತು.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 19–11–2005ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು.

ಅದರಂತೆ ಈ ಪ್ರಕಟಣೆಯನ್ನು ದಿ:30–11–2005ರಂದು ಉದಯವಾಣಿ ಪತ್ರಿಕೆಯಲ್ಲಿ ಮತ್ತು ದಿ: 05–1–2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲ ವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ–80, ಕೆಎ–31, ಇ–4392 ಛಾಸ್ಸಿ ನಂ: 060–934–413642, ಇಂಜಿನ್ ನಂ: 16ಇ–934 – 41405 ಮತ್ತು ಈ ವಾಹನದಲ್ಲಿದ್ದ 5 ತುಂಡು ಶ್ರೀಗಂಧದ ತೂಕ 2 ಕೆ.ಜಿ. ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೈಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 708 ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 20/05-06, ದಿ: 16ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿರ್ಯಾದುದಾರರು** : ವಲಯ ಅರಣ್ಯಾಧಿಕಾರಿ
ಸಾಗರ ವಲಯ

**ಆರೋಪಿಗಳು** : 1) ಶ್ರೀ ಅಣ್ಣಪ್ಪ (2) ನಯಾಜ್ (3) ರಷೀಧ್ ಸಾಬ್
(4) ನರಸಿಂಹ

**ಬಾದ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 10–11–2005ರಂದು ರಾತ್ರಿ ಸಾಗರ ವಲಯದ ತ್ಯಾಗರ್ತಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ತ್ಯಾಗರ್ತಿ ಶಿರಾಳಕೊಪ್ಪ ಲೋಕೋಪಯೋಗಿ ರಸ್ತೆಯ ಮುಳ್ಳಕೆರೆ ಬಸ್‌ನಿಲ್ದಾಣದ ಹತ್ತಿರ ಕಾಯುತ್ತಿರುವಾಗ ದಿ: 11–11–2005ರಂದು ಬೆಳಗ್ಗಿನ ಜಾವ 4–30ರ ಸಮಯದಲ್ಲಿ ತ್ಯಾಗರ್ತಿ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಿ ಪರಿಶೀಲಿಸಲಾಗಿ 7 ಬೀಟೆ ನಾಟಾ 0.235ಎಂ3 ಇದ್ದು, ಇವುಗಳನ್ನು ಸಾಗಿಸಲು ರಹದಾರಿ ಇಲ್ಲವೆಂದು ಮತ್ತು ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾ ಮುದ್ರೆ ಇರುವುದಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಲಗೇಜ್ ಕ್ಯಾರಿಯರ್ ಆಟೋ ರಿಕ್ಷಾ ನಂ. ಕೆಎ–15–3689 ಆಗಿದ್ದು, ಛಾಸ್ಸಿಸ್ ನಂ. BGE–251729 ಇಂಜಿನ್ ನಂ. RSE-101639 ಆಗಿದ್ದು, ಈ ವಾಹನದಲ್ಲಿ ನಾಲ್ಕು ಜನ ಅಸಾಮಿಗಳಿದ್ದು, 1ನೇಯ ಅಸಾಮಿ ಅಣ್ಣಪ್ಪ ಬಿನ್ ದ್ಯಾವಣ್ಣ 21 ವರ್ಷ ಕಾನಕೇರಿ ಪಂಪ್‌ಹೌಸ್ ನಿವಾಸಿ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು 2ನೇಯ ಆಸಾಮಿ ನಯಾಜ್ ಬಿನ್ ನಜೀರ್ ಸಾಬ್, 20 ವರ್ಷ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು 3ನೇಯ ಆಸಾಮಿ ರಷೀದ್ ಸಾಬ್ ಬಿನ್ ಮದಾರ್‌ಸಾಬ್ 35 ವರ್ಷ, ಶಿರಾಳಕೊಪ್ಪದ ಅಕ್ಕಿಪೇಟೆವಾಸಿ, ಶಿಕಾರಿಪುರ ತಾಲ್ಲೂಕು 4ನೇ ಆಸಾಮಿಯ ನರಸಿಂಹ ಬಿನ್ ನರಸಪ್ಪ 24 ವರ್ಷ ತ್ಯಾಗರ್ತಿ ಗ್ರಾಮ ವಾಸಿ ಆನಂದಪುರಂ ಹೋಬಳಿ ಸಾಗರ ತಾಲ್ಲೂಕು ಇವರನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 63, 104ಎ, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಸಾಗರ ವಲಯದ ಅ.ಮೊ. ಸಂಖ್ಯೆ 66/05–06 ದಿ: 11–11–2005ನ್ನು

ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನದ ಮಾಲೀಕರ ಬಗ್ಗೆ ತಿಳಿಸಲು ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ದಿ: 6-12-2005ರಲ್ಲಿ ಪತ್ರವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಕೋರಲಾಗಿತ್ತು. ದಿ: 17-12-2005ರಂದು ಸಾಗರ ಪ್ರಾದೇಶಿಕ ಸಾರಿಗೆ ಅಧಿಕಾರಿ ಈ ನ್ಯಾಯಾಲಯಕ್ಕೆ ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಿರುತ್ತಾರೆ. ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿಯಂತೆ ಆರ್.ಸಿ. ಪೋನರಾದ ಶ್ರೀ ಅಂತೋಣಿ ಬಿನ್ ಪೀಟರ್ ತ್ಯಾಗರ್ತಿ ಗ್ರಾಮ, ಸಾಗರ ತಾಲ್ಲೂಕು ಇವರಿಗೆ ದಿನಾಂಕ: 24-12-2005ರಂದು ಕಾರಣಕೇಳಿ ಪತ್ರ ಜಾರಿ ಮಾಡಿ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಿಮ್ಮ ತಕರಾರು ಇದ್ದಲ್ಲಿ ಈ ಪತ್ರ ತಲುಪಿದ 30 ದಿನದೊಳಗಾಗಿ ಈ ನ್ಯಾಯಾಲಯಕ್ಕೆ ಲಿಖಿತವಾಗಿ ದಾಖಲೆಗಳೊಂದಿಗೆ ಸಲ್ಲಿಸಲು ತಿಳಿಸಲಾಗಿತ್ತು. ಇಲ್ಲಿಯವರೆವಿಗೂ ಇವರು ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಮಿತಿಗೊಳಿಸಿದ ಅವಧಿ ಮುಗಿದಿರುತ್ತದೆ. ಆದ್ದರಿಂದ ಮುಂದಿನ ಕ್ರಮಕೈಗೊಂಡಿದೆ.ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 19-11-2005ರಂದು 30(ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯೂ ದಿ: 30-11-2005ರಂದು ಉದಯವಾಣಿ ದಿನ ಪತ್ರಿಕೆಯಲ್ಲಿ ಮತ್ತು ದಿ: 05-01-2006ರಂದು ರಾಜ್ಯಗೆಜೇಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ವಾಹನ ಲಗೇಜ್ ಕ್ಯಾರಿಯರ್ ಆಟೋ ರಿಕ್ಷಾ ನಂ. ಕೆಎ-15-3689 ಆಗಿದ್ದು, ಮತ್ತು ಈ ವಾಹನದಲ್ಲಿದ್ದ ಬೀಟೆ ಸೈಜ್ 7=0.235ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16-03-2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 709

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 23/05-06, ದಿನಾಂಕ: 16ನೇ ಮಾರ್ಚ್ 2006**

**ಉಪಸ್ಥಿತರು:** ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ.

**ಆರೋಪಿಗಳು** : 1) ಜಕ್ರಿಯಾ (2) ನೂರುಲ್ಲಾ ಖಾನ್ (3) ಅಶ್ವಕ್
(1) ಮತ್ತು (2)ನೆಯವನನ್ನು ಬಂದಿಸಿದೆ. 3ನೆಯವನು ತಪ್ಪಿಸಿಕೊಂಡಿದ್ದಾನೆ.

**ಭಾಧ್ಯತೆದಾರರು** : ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:–**

ದಿ: 30–11–2005ರಂದು ಶಿಕಾರಿಪುರ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾಲ್ಲೂಕು ಶಿಕಾರಿಪುರ–ಶಿರಾಳಕೊಪ್ಪ ಪಿಡಬ್ಲೂಡಿ ರಸ್ತೆಯಲ್ಲಿ ಪುನದಹಳ್ಳಿ ಗ್ರಾಮದಿಂದ ಶಿರಾಳಕೊಪ್ಪದ ಕಡೆ ಸುಮಾರು 150 ಮೀಟರ್ ದೂರದಲ್ಲಿ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಿದಾಗ ವಾಹನದಲ್ಲಿದ್ದ ಅಸಾಮಿಗಳು ಓಡಲು ಪ್ರಯತ್ನಿಸಿದಾಗ 3 ಜನರಲ್ಲಿ ಇಬ್ಬರನ್ನು ಹಿಡಿದಿರುತ್ತಾರೆ. ನಂತರ ವಾಹನ ಪರಿಶೀಲಿಸಿದಾಗ ಟೆಂಪೋಟ್ರಾಕ್ಸ್ ಕೆಎ–15, ಎಂ–553, ಛಾಸ್ಸಿ ನಂ: TX945815 J–96 ಇಂಜಿನ್ ನಂ:6169369153016 ಆಗಿದ್ದು, ವಾಹನದೊಳಗಡೆ ಚಾಲಕನು ಕೂರುವ ಹಿಂಭಾಗದ ಸೀಟಿನಲ್ಲಿ ಕೆಳಗೆ ಮೂರು ಗೊಬ್ಬರದ ಚೀಲಗಳೊಳಗೆ ಶ್ರೀಗಂಧದ ಚಕ್ಕೆ ಮತ್ತು ಸಣ್ಣ ಸಣ್ಣ ಶ್ರೀಗಂಧ ತುಂಡುಗಳಿಗೆ ಯಾವುದೇ ಇಲಾಖಾ ಛಾಪಾವಿರುವುದಿಲ್ಲ. ಅಸಾಮಿಗಳನ್ನು ವಿಚಾರಿಸಲಾಗಿ 1ನೇಯವ ಜಕ್ರಿಯಾ ಖಾನ್ ಬಿನ್ ಅನ್ವರ್ ಖಾನ್, 26 ವರ್ಷ, ಚಿಕ್ಕ ಜಂಬೂರು ಗ್ರಾಮ, ಎರಡನೇಯವನು ನೂರುಲ್ಲಾ ಖಾನ್ ಬಿನ್ ಜಬ್ಬಾರ್ ಖಾನ್, 28 ವರ್ಷ, ಚಿಕ್ಕ ಜಂಬೂರು ಗ್ರಾಮ ವಾಸಿ ಮತ್ತು ಮೂರನೇಯವನು ಅಶ್ಪಕ್ ಬಿನ್ ಚಿಮನ್ ಖಾನ್, ಚಿಕ್ಕಜಂಬೂರು ವಾಸಿ ಇವನು ಶ್ರೀಗಂಧವನ್ನು ಚಿಕ್ಕಜಂಬೂರಿನ ಬಳಿ ತಂದು ನಮಗೆ ಕೊಟ್ಟನೆಂದು, ಅದನ್ನು ನವಲೇ ಗಣಪತಿ ದೇವಸ್ಥಾನದ ಬಳಿ ತಂದುಕೊಡಬೇಕೆಂದು, ಅವನು ಪುನಃ ಅಲ್ಲಿ ಬಂದು ತೆಗೆದುಕೊಳ್ಳುತ್ತೇನೆಂದು ತಿಳಿಸಿದನೆಂದು, ಇದು ಸಾಗಿಸಲು ರಹದಾರಿ ಇಲ್ಲವೆಂದು ಆಸಾಮಿಗಳು ತಿಳಿಸಿರುತ್ತಾರೆ. ಮತ್ತು ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ, ಶ್ರೀಗಂಧ ಮತ್ತು ಅಸಾಮಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ಮಾಹಿತಿ ವರದಿ ಮತ್ತು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಎ, 84, 86 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ.ಸಂಖ್ಯೆ:62/05–06 ದಿ: 30–11–05ನ್ನು ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನದ ಮಾಲೀಕರ ಬಗ್ಗೆ ತಿಳಿಯಲು ಸಾಗರ ಪ್ರಾದೇಶಿಕ ಅಧಿಕಾರಿಗೆ ದಿ: 06–12–05ರಂದು ಈ ನ್ಯಾಯಾಲಯದಿಂದ ಪತ್ರ ಬರೆಯಲಾಗಿದೆ. ಆದರೆ ಅವರಿಂದ ಈ ವಾಹನದ ಬಿ ಎಕ್ಸ್‌ಟ್ರಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಈ ವಾಹನ ಮಾಲೀಕರಿಗೆ 71ಬಿ (1)ರ ಪ್ರಕಾರ ನೋಟೀಸು ಕೊಟ್ಟಿರುವುದಿಲ್ಲ. ಆದ್ದರಿಂದ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಯಿತು.

ನಂತರ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 05–01–2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ:21–01–06ರಂದು ವನರಾಜ ಪತ್ರಿಕೆಯಲ್ಲಿ ಮತ್ತು ದಿ: 23–01–2006ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿ: 26–1–2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನು ಬದ್ದವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ಜೀಪು ಕೆಎ–15, ಎಂ–553ನ್ನು ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ಸಣ್ಣ ಚಕ್ಕೆ 45 ಕೆ.ಜಿ. ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನುಬದ್ದವಾಗಿ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 710

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 26/05-06, ದಿನಾಂಕ: 16ನೇ ಮಾರ್ಚ್ 2006**

| | | |
|---|---|---|
| **ಉಪಸ್ಥಿತರು** | : | ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ |
| **ಫಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ,<br>ಹೊಸನಗರ ವಲಯ, ಹೊಸನಗರ |
| **ಆರೋಪಿಗಳು** | : | 1) ನಾಗರಾಜ್, 2) ಲೋಕೇಶ್ |
| **ಭಾದ್ಯತೆದಾರರು** | : | ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:-**

ದಿ: 13-12-2005 ಹೊಸನಗರ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ಕಸಬಾ ಹೋಬಳಿ ಜಯನಗರದಿಂದ ಸೊತ್ತಕ್ಕೆ ಹೋಗುವ ರಸ್ತೆಯಲ್ಲಿ ಶನೀಶ್ವರ ದೇವಸ್ಥಾನದ ಹತ್ತಿರ ಕಾಯುತ್ತಿರುವಾಗ ಸಂಜೆ 7.30ರ ಸಮಯದಲ್ಲಿ ಸೊತ್ತ ಕಡೆಯಿಂದ ಹೊಸನಗರದ ಕಡೆಗೆ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಸ್ವಲ್ಪ ದೂರದಲ್ಲಿ ವಾಹನವನ್ನು ನಿಲ್ಲಿಸಿ ಇಬ್ಬರು ಅಸಾಮಿಗಳು ವಾಹನ ಮತ್ತು ಅವರು ತಂದ ಗೋಣಿ ಚೀಲವನ್ನು ಬಿಟ್ಟು ಓಡಲು ಪ್ರಾರಂಭಿಸಿದರು. ಆದರೆ ಅವರನ್ನು ಇಲಾಖೆಯವರು ಸುತ್ತುವರಿದು ಹಿಡಿದರು. ಇವರ ಹೆಸರು, ವಿಳಾಸ ಈ ರೀತಿ ಇದೆ. 1) ನಾಗರಾಜ್ ಬಿನ್ ಕುಲಾಲು, 24 ವರ್ಷ, ಹೊಸನಗರ ಟೌನ್, (2) ಲೋಕೇಶ್ ಬಿನ್ ರಾಮನಾಯ್ಕ, 22 ವರ್ಷ, ಮಳಲಿ ಗ್ರಾಮ, ಜಯನಗರ ಅಂಚೆ, ಹೊಸನಗರ ತಾಲ್ಲೂಕು. ನಂತರ ಅವರು ತಂದ ಗೋಣಿ ಚೀಲ ಬಿಡಿಸಿ ನೋಡಲಾಗಿ ಅದರಲ್ಲಿ ಶ್ರೀಗಂಧದ ತುಂಡು, ಬೇರು, ಮುಡಿ, ಚಕ್ಕೆಗಳಿದ್ದವು. ಇವುಗಳ ತೂಕ 9 ಕೆ.ಜಿ.. ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದರು. ಆದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಯಮಾಹ ಬೈಕ್ ಕೆಎ-15, ಇ-3201, ಶ್ರೀಗಂಧ ಮತ್ತು ಅಸಾಮಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ಕ್ರಮ ಜರುಗಿಸಿ, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಎ, 84, 86, 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ 83/2005-06 ದಿ: 13-12-05ನ್ನು ದಾಖಲಿಸಿ, ಆಸಾಮಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿ, ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನದ ಆರ್.ಸಿ.ಪೋನರ್ ಬಗ್ಗೆ ಬಿ ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ದಿ: 24-12-2005ರಂದು ಸಾಗರ ಪ್ರಾದೇಶಿಕ ಅಧಿಕಾರಿಗೆ ಪತ್ರ ಬಂದು ಕೋರಲಾಯಿತು. ದಿ:27-12-2005ರಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ವಾಹನ ಮಾಲೀಕರಾದ ಶ್ರೀ ಆರ್.ಎಂ.ದ್ವಾರಕನಾಥ ಬಿನ್ ಆರ್.ಎಂ.ಮಂಜುನಾಥಪ್ಪ, ರೈಲ್ವೇ ಸ್ಟೇಶನ್ ರೋಡ್, ಸಾಗರ ಇವರಿಗೆ ದಿ: 28-12-2005ರಂದು ಕಾರಣ ಕೇಳಿ ಪತ್ರ ಜಾರಿಮಾಡಿದೆ. ಅವರು ಯಾವುದೇ ಉತ್ತರವನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿಲ್ಲ. ಇವರು ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಿಲ್ಲ.

ನಂತರ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 05-01-2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ:21-01-06ರಂದು ವನರಾಜ ಪತ್ರಿಕೆಯಲ್ಲಿ ಮತ್ತು ದಿ: 23-01-2006ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿ: 26-1-2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಜಪ್ತು ಮಾಡಿದ ಯಮಾಹ ಬೈಕ್ ಕೆಎ–15, ಇ–3201 ಮತ್ತು ಈ ವಾಹನದಲ್ಲಿದ್ದ ಶ್ರೀಗಂಧ 9 ಕೆ.ಜಿ.ಯನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನುಬದ್ದವಾಗಿ ಲಿಖಿತ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 711 ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ. ವಾಹನ. 27/05–06, ದಿನಾಂಕ: 16ನೇ ಮಾರ್ಚ್ 2006**

| | |
|---|---|
| **ಉಪಸ್ಥಿತರು** | : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ |
| **ಪಿರ್ಯಾಧಿದಾರರು** | : ವಲಯ ಅರಣ್ಯಾಧಿಕಾರಿ,<br>ಹೊಸನಗರ ವಲಯ, ಹೊಸನಗರ |
| **ಆರೋಪಿಗಳು** | : 1) ಹೊನ್ನಪ್ಪ 2) ಮಂಜಪ್ಪ 3) ಶ್ರೀನಿವಾಸ |
| **ಭಾದ್ಯತೆದಾರರು** | : ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:–**

ದಿ: 14–12–2005 ಹೊಸನಗರ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ಹುಂಚಾ ಹೋಬಳಿ ಹಿರಿಯೋಗಿ ಗ್ರಾಮದ ಸರ್ವೆ ನಂ: 16ರ ಅರಣ್ಯ ಪ್ರದೇಶದಲ್ಲಿ ಕಾಯುತ್ತಿರುವಾಗ ಸಾಂವತೂರು ಕಡೆಯಿಂದ ಹಿರಿಯೂರು ಕಡೆಗೆ ಒಂದು ಬಿಳಿ ಅಂಬಾಸಿಡರ್ ಕಾರ್ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಕಾರನ್ನು ನಿಲ್ಲಿಸಿ, ಕಾರಿನಲ್ಲಿದ್ದ ನಾಲ್ಕು ಜನರು ಓಡಲು ಪ್ರಾರಂಭಿಸಿದರು. ಅದರಲ್ಲಿ 3 ಜನರನ್ನು ಹಿಡಿದಿರುತ್ತಾರೆ. ಒಬ್ಬನು ಕೈಗೆ ಸಿಗದೆ ತಪ್ಪಿಸಿಕೊಂಡಿರುತ್ತಾನೆ. ನಂತರ ವಾಹನವನ್ನು ಪರಿಶೀಲಿಸಿದಾಗ ಎಂಇಕ್ಯೂ–7080 (ಎಂವೈಡಬ್ಲ್ಯೂ–1710) ಇಂಜಿನ್ ನಂ CD171516B, ಛಾಸ್ಸಿಸ್ ನಂ:11–24–9628 ಆಗಿದ್ದು, ಕಾರಿನ ಒಳಗಡೆ ಸೀಟಿನ ಕೆಳಭಾಗದಲ್ಲಿ ಬಾಕ್ಸನ್ನು ತಯಾರಿಸಿದ್ದು ಅದರಲ್ಲಿ ಕೆಲವು ಶ್ರೀಗಂಧದ ಚಕ್ಕೆ, ಪುಡಿ ತುಂಬಿದ್ದರು. ಮತ್ತು ಕಾರಿನ ಡಿಕ್ಕಿಯಲ್ಲಿ 3 ಶ್ರೀಗಂಧದ ತುಂಡಿತ್ತು. ಒಟ್ಟು 49 ಕೆ.ಜಿ.ಇದ್ದು ಇವುಗಳ ಮೇಲೆ ಯಾವುದೇ ಛಾಪಾದ ಗುರುತಿರುವುದಿಲ್ಲ ಮತ್ತು ಸಾಗಿಸಲು ರಹದಾರಿ ಇಲ್ಲವೆಂದು ಆಸಾಮಿಗಳು ತಿಳಿಸಿರುತ್ತಾರೆ. ಆದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ, ಶ್ರೀಗಂಧ ಮತ್ತು ಅಸಾಮಿಗಳಾದ 1) ಹೊನ್ನಪ್ಪ ಬಿನ್ ದ್ಯಾವನಾಯ್ಕ, 45 ವರ್ಷ, ಮಾವಿನ ಕಟ್ಟೆ ಅಂಚೆ, ಹೊಸನಗರ ತಾಲ್ಲೂಕು 2) ಮಂಜಪ್ಪ ಬಿನ್ ದ್ಯಾವನಾಯ್ಕ, 43 ವರ್ಷ, ಮಾವಿನ ಕಟ್ಟೆ ಅಂಚೆ, ಹೊಸನಗರ ತಾಲ್ಲೂಕು 3) ಶ್ರೀನಿವಾಸ ಬಿನ್ ಕುಲಾಲಿ, 30 ವರ್ಷ, ಖಾನ್‌ಮನೆ ವಾಸಿ, ಮಳಲಿ ಗ್ರಾಮ, ಜಯನಗರ ಅಂಚೆ, ಹೊಸನಗರ ತಾಲ್ಲೂಕು ಇವರನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ಕ್ರಮ ಜರುಗಿಸಿ, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಎ, 84, 86, 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಹೊಸನಗರ ವಲಯದ ಅ.ಮೊ. ಸಂಖ್ಯೆ 84/05–06 ದಿ: 14–12–05ನ್ನು ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನ ಯಾರ ಹೆಸರಿಗೆ ನೊಂದಣಿಯಾಗಿದೆ ಎಂಬ ಬಗ್ಗೆ ಈ ವಾಹನದ ಬಿ ಎಕ್ಸ್‌ಟ್ರಾಕ್ಟನ್ನು ಒದಗಿಸಲು ಪ್ರಾದೇಶಿಕ ಅಧಿಕಾರಿ, ಇಂದಿರಾ ನಗರ, (ಪೂರ್ವ) ಬೆಂಗಳೂರು ಇವರಿಗೆ ಈ ನ್ಯಾಯಾಲಯದಿಂದ ದಿ:

24-12-2005ರಂದು ಪತ್ರ ಬರೆದು ಕೋರಲಾಗಿತ್ತು. ಅವರ ಕಛೇರಿಯಲ್ಲಿ ಈ ವಾಹನದ ನೊಂದಣಿ ಬಗ್ಗೆ ಮಾಹಿತಿ ಇರುವುದಿಲ್ಲವೆಂದು ದಿ: 07-01-2006 ರಂದು ತಿಳಿಸಿರುತ್ತಾರೆ.

ನಂತರ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿ: 05-01-2006ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿ:21-01-06ರಂದು ವನರಾಜ ಪತ್ರಿಕೆಯಲ್ಲಿ ಮತ್ತು ದಿ: 23-01-2006ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿ: 26-1-2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನು ಬದ್ದವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಹೊಸನಗರ ಇವರು ಜಪ್ತು ಮಾಡಿದ ಅಂಬಾಸಿಡರ್ ಕಾರ್ ಎಂಇಕ್ಯೂ-7080 ಎಂವೈಡಬ್ಲ್ಯೂ-1710 ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ತುಂಡು ಮತ್ತು ಚಕ್ಕೆ ಸೇರಿದಂತೆ 49 ಕೆ.ಜಿ.ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16-03-2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ದವಾಗಿ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 733 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 28/05-06, ದಿ: 16ನೇ ಮಾರ್ಚ್ 2006**

| | | |
|---|---|---|
| **ಉಪಸ್ಥಿತರು** | : | ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ.<br>ಅಧಿಕೃತ ಅಧಿಕಾರಿ ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ,<br>ಸಾಗರ ವಿಭಾಗ, ಸಾಗರ |
| **ಪಿರ್ಯಾದುದಾರರು** | : | ವಲಯ ಅರಣ್ಯಾಧಿಕಾರಿ<br>ಚೋರಡಿ ವಲಯ |
| **ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ. |
| **ಬಾದ್ಯತೆದಾರರು** | : | ಯಾರು ಬಂದಿರುವುದಿಲ್ಲ. |

**ಪ್ರಸ್ತಾವನೆ:-**

ದಿ: 16-12-2005ರಂದು ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿ ಚೋರಡಿ ಗ್ರಾಮದ ಚೋರಡಿಯಿಂದ ಸಾಗರ ಹೋಗುವ ರಾಷ್ಟ್ರೀಯ ಹೆದ್ದಾರಿಯ ಬಲಭಾಗ ಕರಡಿಬೆಟ್ಟ ಮನ್ನಾ ಜಂಗಲಿಯ ಸನ್ನಿವಾಸದ ಸ.ನಂ. 6ರ ಗಂಗಕಲ್ಯಾಣ ಯೋಜನೆಯ ಬೋರ್ಡ್‌ಗಲ್ಲಿನ ಹತ್ತಿರ ಗಸ್ತು ತಿರುಗುತ್ತಿದ್ದಾಗ ದೂರದಲ್ಲಿ ನಿಂತ ವಾಹನವನ್ನು ನೋಡಲಾಗಿ ವಾಹನದೊಳಗೆ ಸಾಗುವಾನಿ 20 ತುಂಡುಗಳಿದ್ದು, ಈ ತುಂಡುಗಳ ಅಳತೆ 20=3.310ಎಂ3 ಇದ್ದು, ಈ ವಾಹನದಲ್ಲಿ ಅಸಾಮಿಗಳು ಯಾರೂ ಪತ್ತೆಯಾಗದ ಕಾರಣ ಮತ್ತು ಈ ತುಂಡುಗಳನ್ನು ಗರಗಸದಿಂದ ಕೊಯ್ತುಮಾಡಿದ್ದಾಗಿದ್ದು, ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತು ಇರಲಿಲ್ಲ ಮತ್ತು ಈ ತುಂಡುಗಳನ್ನು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆಯೆಂದು ಪರಿಗಣಿಸಿ ವಾಹನ

ಮಿನಿಲಾರಿ ಕೆಎ–19–ಸಿ–7866, ಇಂಜಿನ್ ನಂಬರ್ ಇ483ಎ01060292, ಛಾಸ್ಸಿ ನಂಬರ್ 20ಜಿಸಿ01000166ನ್ನು ಮತ್ತು ಸಾಗುವಾನಿ ತುಂಡುಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಮಹಜರ್ ಕ್ರಮ ಜರುಗಿಸಿ, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಚೋರಡಿ ವಲಯದ ಅ.ಮೊ. ಸಂಖ್ಯೆ 90/05–06 ದಿ: 16–12–2005ನ್ನು ದಾಖಲಿಸಿ ನಂತರ ವಾಹನವನ್ನು 71ಎ ವಿಚಾರಣೆಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿರುತ್ತದೆ.

ನಂತರ ಈ ವಾಹನದ ಮಾಲೀಕರ ಬಗ್ಗೆ ತಿಳಿಸಲು ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ದಿ: 6–01–2006ರಂದು ಪತ್ರವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ಕೋರಲಾಗಿತ್ತು. ದಿ: 13–01–2006ರಂದು ಮಂಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿ ಈ ನ್ಯಾಯಾಲಯಕ್ಕೆ ಈ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ಒದಗಿಸಿರುತ್ತಾರೆ. ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿಯಂತೆ ಆರ್.ಸಿ. ವ್ಹೋನರಾದ Joseph D Cruz S/o Late Monthu D Cruz, No 31, 5th Block, Katipalla Mangalore ಇವರಿಗೆ ದಿನಾಂಕ: 25–01–2006ರಂದು ಕಾರಣಕೇಳಿ ಪತ್ರ ಜಾರಿ ಮಾಡಿ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಿಮ್ಮ ತಕರಾರು ಇದ್ದಲ್ಲಿ ಈ ಪತ್ರ ತಲುಪಿದ 30 ದಿನದೊಳಗಾಗಿ ಈ ನ್ಯಾಯಾಲಯಕ್ಕೆ ಲಿಖಿತವಾಗಿ ದಾಖಲೆಗಳೊಂದಿಗೆ ಸಲ್ಲಿಸಲು ತಿಳಿಸಲಾಗಿತ್ತು. ಇಲ್ಲಿಯವರೆವಿಗೂ ಇವರು ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಮಿತಿಗೊಳಿಸಿದ ಅವಧಿ ಮುಗಿದಿರುತ್ತದೆ. ಆದ್ದರಿಂದ ಮುಂದಿನ ಕ್ರಮಕ್ಕೈಗೊಂಡಿದೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿ: 05-01–2006ರಂದು 30(ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯೂ ದಿ: 21-01–2006ರಂದು ವನರಾಜ ದಿ: 23–01–2006ರಂದು ಸಾಗರ ಸಂದೇಶ ದಿನ ಪತ್ರಿಕೆಯಲ್ಲಿ ಮತ್ತು ದಿ: 26–01–2006ರಂದು ರಾಜ್ಯಗೆಜೇಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಚೋರಡಿ ಇವರು ಜಪ್ತು ಮಾಡಿದ ವಾಹನ ಮಿನಿಲಾರಿ ನಂ ಕೆಎ–19–ಸಿ–7866 ಆಗಿದ್ದು, ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ತುಂಟು 20=3.310ಎಂ3ವು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–03–2006 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕಾನೂನು ಬದ್ಧವಾಗಿ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 734

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ,**
**ಭದ್ರಾವತಿ ವಿಭಾಗ, ಭದ್ರಾವತಿ.**

**ಸಂಖ್ಯೆ:ಎಫ್.ಓ.ಸಿ.–ಸಿಓಎನ್–ಸಿಆರ್–24/2003–04, ದಿನಾಂಕ: 08ನೇ ಮಾರ್ಚ್ 2006**

**ಉಪಸ್ಥಿತರು** : ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಪಿರ್ಯಾದಿದಾರರು** : ವಲಯ ಅರಣ್ಯಾಧಿಕಾರಿ,
ಭದ್ರಾವತಿ ವಲಯ, ಭದ್ರಾವತಿ

**ಅರ್ಜಿದಾರರು** : ನಜೀರ್ ಖಾನ್ ಬಿನ್ ಪಾಚಾ ಖಾನ್,
ಸಿದ್ಧರಮಟ್ಟಿ, ಗುಡ್ಡದನೇರಲೆಕೆರೆ ಗ್ರಾಮ,
ಭದ್ರಾವತಿ.

**ಪ್ರಕರಣದ ಹಿನ್ನೆಲೆ:–**

ದಿನಾಂಕ: 08–03–2004 ರಂದು ಭದ್ರಾವತಿ ತಾಲ್ಲೂಕು, ಕೂಡ್ಲಿಗೆರೆ ಹೋಬಳಿ, ಭದ್ರಾವತಿ ವಲಯ ಅರಳಿಹಳ್ಳಿ ಶಾಖೆಯ ಅಂತರಗಂಗೆ ಮನ್ನಾ ಜಂಗಲಿಗೆ ಸೇರಿದ ದೇವರಹಳ್ಳಿ ಗಸ್ತಿನ ಬೆಳ್ಳಿಗೆರೆಯಿಂದ ನೇರಲಕೆರೆ ಬಿ.ಆರ್.ಎಲ್.ಬಿ.ಸಿ. ಚಾನಲ್ ಅಕ್ವಿಡೆಟ್‌ಗೆ ಬರುವ ಕಾಲುದಾರಿಯ ಕಾಗೇಹಳ್ಳದ ಮೇಲ್ಭಾಗದಲ್ಲಿ ಅರಳಿಹಳ್ಳಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿ ವರ್ಗದವರು ಗಸ್ತು ಮಾಡಿಕೊಂಡು ಬರುವಾಗ ಎದುರು ಭಾಗದಿಂದ ಒಂದು ಸ್ಕೂಟರ್ ಬರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿ ಹತ್ತಿರ ಸಮೀಪಿಸುತ್ತಿದ್ದಂತೆ ಹಿಂದುಗಡೆ ಕುಳಿತ್ತಿದ್ದ ಆಸಾಮಿ ಕೈಯಲ್ಲಿದ್ದ ಚೀಲವನ್ನು ಬಿಸಾಡಿ ವಾಹನದಿಂದ ಜಿಗಿದು ಓಡಿದನು. ಅವನನ್ನು ಹಿಡಿಯಲು ಪ್ರಯತ್ನಪಟ್ಟರೂ ಸಿಗಲಿಲ್ಲ. ಆದರೆ ವಾಹನ ಚಲಾಯಿಸುತ್ತಿದ್ದ ಆಸಾಮಿಯನ್ನು ವಾಹನದ ಸಮೇತ ಹಿಡಿದುಕೊಂಡಿರುತ್ತಾರೆ. ನಂತರ ಆಸಾಮಿಯ ಹೆಸರನ್ನು ವಿಚಾರಿಸಿದಾಗ ಆತನು ನಜೀರ್ ಖಾನ್ ಬಿನ್ ಪಾಚಾ ಖಾನ್, ಭದ್ರಾವತಿ ತಾಲ್ಲೂಕು, ಸಿದ್ಧರಮಟ್ಟಿ ವಾಸಿ ಎಂದು ತಿಳಿಸಿದ್ದು, ಓಡಿ ಹೋದ ಆಸಾಮಿ ಮಹಮದ್ ಅಯೂಬ್ ಬಿನ್ ಅಬ್ದುಲ್ ರಶೀದ್, ಭದ್ರಾವತಿ ತಾಲ್ಲಕು, ಸಿದ್ಧರಮಟ್ಟಿ ವಾಸಿ ಎಂದು ತಿಳಿದುಬಂದು ನಂತರ ಬಿಸಾಡಿದ ಪ್ಲಾಸ್ಟಿಕ್ ಚೀಲವನ್ನು ಬಿಚ್ಚಿ ಪರಿಶೀಲಿಸಿದಾಗ ಶ್ರೀಗಂಧದ ತುಂಡುಗಳು ಇರುವುದು ಕಂಡುಬಂದವು. ಅವುಗಳಿಗೆ ಯಾವುದೇ ರಹದಾರಿ ವಗೈರೆ ಇಲ್ಲದೇ ಇದ್ದು ಅಕ್ರಮ ಸಾಗಾಣಿಕೆ ಎಂದು ಖಚಿತ ಪಡಿಸಿಕೊಂಡು ವಾಹನ ಹಾಗೂ ಶ್ರೀಗಂಧದ ತುಂಡುಗಳನ್ನು ಆಸಾಮಿಯ ಸಮೇತ ಅಮಾನತ್ತುಪಡಿಸಿರುತ್ತಾರೆ. ಶ್ರೀಗಂಧವನ್ನು ಏಣಿಕೆ ಮಾಡಲಾಗಿ ಒಟ್ಟು 9 ತುಂಡುಗಳು ಇದ್ದು ಹಾಗೂ ಸ್ವಲ್ಪ ಚಕ್ಕೆ ಚೂರು ಬೇರುಗಳಿದ್ದು, ಅವುಗಳಿಗೆ ಕೆಂಪು ಬಣ್ಣದಿಂದ ಕ್ರಮ ಸಂಖ್ಯೆ ಕೊಟ್ಟು ಅಳತೆ ಮಾಡಿ ಇಲಾಖಾ ಛಾಪಾ ಮುದ್ರಿಸಲಾಯಿತು. ವಾಹನವನ್ನು ಪರಿಶೀಲಿಸಿದಾಗ ವಾಹನ ಸುಜುಕಿ ಮ್ಯಾಕ್ಸ್ 100 ಆರ್.ಸಂಖ್ಯೆ:ಕೆಎ–14–ಹೆಚ್–7118 ಆಗಿರುತ್ತದೆ. ನಂತರ ಸ್ಥಳದಲ್ಲಿ ಪಂಚನಾಮೆ ಜರುಗಿಸಿ ವಾಹನ, ಶ್ರೀಗಂಧದ ತುಂಡುಗಳು ಹಾಗೂ ಅಪರಾಧಿಯನ್ನು ಬಂಧಿಸಿ ಮುಂದಿನ ನಡವಳಿಕೆಗೆ ವಲಯ ಅರಣ್ಯಾಧಿಕಾರಿ ಕಛೇರಿಗೆ ತೆಗೆದುಕೊಂಡು ಹೋಗಲು ತೀರ್ಮಾನಿಸಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ ಕಛೇರಿಯಲ್ಲಿ ಪ್ರಥಮ ಮಾಹಿತಿ ವರದಿ ಮತ್ತು ಸೀಜರ್ ರಿಪೋರ್ಟ್ ದಾಖಲಿಸಿ ಎಫ್.ಓ.ಸಿ. ನಂ:252/03–04 ನ್ನು ನೀಡಿ ವಲಯ ಅರಣ್ಯಾಧಿಕಾರಿ, ಭದ್ರಾವತಿ ರವರ ವರದಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸಲು ಕೋರಿಕೊಂಡಿರುತ್ತಾರೆ.

ವಲಯ ಅರಣ್ಯಾಧಿಕಾರಿ, ಭದ್ರಾವತಿ ವಲಯ ಇವರು ಸಲ್ಲಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 1963 ಸೆಕ್ಷನ್ 71 ಎ ಪ್ರಕಾರ ಕ್ರಮ ಜರುಗಿಸಿ ವಶಪಡಿಸಿಕೊಂಡ ವಾಹನ ಹಾಗೂ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಭದ್ರಾವತಿ ರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ. ನಂತರ ಈ ಪ್ರಕರಣಕ್ಕೆ ಸಂಬಂಧಿಸಿದ ವಾಹನದ ಮಾಲೀಕರು ಯಾರಾದರೂ ಇದ್ದರೆ ಈ ನ್ಯಾಯಾಲಯಕ್ಕೆ ಖುದ್ದಾಗಿ ಅಥವಾ ನ್ಯಾಯವಾದಿಗಳ ಮುಖಾಂತರ ವಾಹನಕ್ಕೆ ಸಂಬಂಧಿಸಿದ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಲು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ದಿನಾಂಕ:01–04–2004 ರಂದು ಪ್ರಕಟಿಸಲಾಗಿತ್ತು. ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ 30 ದಿವಸ ಕಳೆದರೂ ಸಹ ಯಾರೂ ವಾಹನದ ಬಗ್ಗೆ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ನಂತರ ಅರಣ್ಯ ಪ್ರಕರಣದಲ್ಲಿ ವಶಪಡಿಸಿಕೊಂಡ ಸುಜುಕಿ ಮ್ಯಾಕ್ಸ್ 100 ಆರ್ ಸಂಖ್ಯೆ: ಕೆಎ–14–ಹೆಚ್–7116 ಹಾಗೂ ಶ್ರೀಗಂಧದ ತುಂಡು 9 ಮತ್ತು ಚಕ್ಕೆ ಬೇರುಗಳು ಒಟ್ಟು 4 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಿ ದಿನಾಂಕ: 02–06–2004 ರಂದು ಆದೇಶ ಹೊರಡಿಸಿರುತ್ತದೆ.

ದಿನಾಂಕ: 22–06–2004 ರಂದು ಶ್ರೀ ನಜೀರ್ ಖಾನ್ ಬಿನ್ ಪಾಚಾ ಖಾನ್, ಸಿದ್ಧರಮಟ್ಟಿ, ಭದ್ರಾವತಿ ತಾಲ್ಲೂಕು ರವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಟಿ.ವಿ.ಎಸ್. ಸುಜುಕಿ ಮೋಟಾರ್ ಸೈಕಲ್ ಸಂಖ್ಯೆ: ಕೆಎ–14–ಹೆಚ್–7118 ರ ಮಾಲೀಕನಾಗಿರುತ್ತೇನೆ. ದಿನಾಂಕ: 07–03–2004 ರಂದು ಸದರಿ

ವಾಹನದಲ್ಲಿ ಶಿವಮೊಗ್ಗಕ್ಕೆ ಹೋಗಬೇಕಾದರೆ ಒಬ್ಬ ವ್ಯಕ್ತಿ ವಾಹನದಲ್ಲಿ ಭದ್ರಾವತಿಗೆ ಡ್ರಾಪ್ ಕೇಳಿದನು, ನಾನು ಅವನನ್ನು ಕರೆದುಕೊಂಡು ಬರಬೇಕಾದರೆ ಅರಣ್ಯ ಸಿಬ್ಬಂದಿ ವರ್ಗದವರು ಸಿದ್ದರಮಟ್ಟಿ ಮತ್ತು ಗುಡ್ಡದನೇರಲೆಕೆರೆ ಮಧ್ಯೆ ಹಳ್ಳದ ಸೇತುವೆ ಬಳಿ ವಾಹನವನ್ನು ನಿಲ್ಲಿಸಿದರು. ಆ ಸಮಯದಲ್ಲಿ ವಾಹನದ ಹಿಂದೆ ಕುಳಿತಿದ್ದ ಆಸಾಮಿ ವಾಹನದಿಂದ ಜಿಗಿದು ಕೈಯಲ್ಲಿದ್ದ ಪ್ಲಾಸ್ಟಿಕ್ ಚೀಲವನ್ನು ಬಿಸಾಡಿ ಓಡಿ ಹೋಗಿರುತ್ತಾನೆ. ಸದರಿ ಬ್ಯಾಗಿನಲ್ಲಿರುವುದು ಶ್ರೀಗಂಧ ಎಂದು ನನಗೆ ತಿಳಿದಿರುವುದಿಲ್ಲ. ಈ ಅಕ್ರಮ ಶ್ರೀಗಂಧದ ಸಾಗಾಣಿಕೆಗೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ನಾನು ನಿರಪರಾಧಿ, ವಾಹನವನ್ನು ದಿನನಿತ್ಯದ ಕೆಲಸಕಾರ್ಯಗಳಿಗೆ ಇಟ್ಟು ಕೊಂಡಿರುತ್ತೇನೆ. ವಾಹನವನ್ನು ಕಛೇರಿ ಬಯಲಿನಲ್ಲಿಟ್ಟಿರುವುದರಿಂದ ಬಿಸಿಲು ಮಳೆಗೆ ಹಾಳಾಗಿ ಉಪಯೋಗಕ್ಕೆ ಬಾರದಂತೆ ಆಗುತ್ತದೆ. ದಯಮಾಡಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ. ಈ ಬಗ್ಗೆ ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ಧನಾಗಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರಿಗೆ ಈ ನ್ಯಾಯಾಲಯದಿಂದ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿದ್ದು, ಅರ್ಜಿದಾರರ ಪರ ವಕೀಲರು ದಿನಾಂಕ: 07–07–2004 ರಂದು ಸಮಜಾಯಿಷಿ ನೀಡಿ ಅರ್ಜಿದಾರರ ವಾಹನದಲ್ಲಿ ನಡೆದ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಗೂ ಅರ್ಜಿದಾರರಿಗೂ ಯಾವುದೇ ಸಂಬಂಧ ಇರುವುದಿಲ್ಲ. ಈಗಾಗಲೇ ದಿನಾಂಕ: 22–06–2004 ರಂದು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ಎಲ್ಲಾ ವಿಚಾರಣೆಗಳನ್ನು ವಿವರವಾಗಿ ತಿಳಿಸಲಾಗಿದ್ದು, ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ: 28–07–2004 ರಂದು ಸಹಾಯಕ ಸರ್ಕಾರಿ ಅಭಿಯೋಜಕರ, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ಇವರು ಆಕ್ಷೇಪಣಾ ಪತ್ರ ಸಲ್ಲಿಸಿ ದಿನಾಂಕ:07–03–2004 ರಂದು ಭದ್ರಾವತಿ ವಲಯ ಅರಣ್ಯಾಧಿಕಾರಿ, ಸಿಬ್ಬಂದಿ ವರ್ಗದವರು ಟಿ.ವಿ.ಎಸ್. ಸುಜುಕಿ ಮ್ಯಾಕ್ಸ್ 100 ಸಂಖ್ಯೆ: ಕೆಎ–14–ಹೆಚ್–7118 ರಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು ಸಾಗಾಣಿಕೆ ಸಂಬಂಧ ವಶಪಡಿಸಿಕೊಂಡಿರುತ್ತಾರೆ. ಈ ಸಂಬಂಧ ವಾಹನದ ಮಾಲೀಕ/ ಅರ್ಜಿದಾರರಾದ ಶ್ರೀ ನಜೀರ್ ಖಾನ್ ಬಿನ್ ಪಾಚಾ ಖಾನ್, ಭದ್ರಾವತಿ ಇವರನ್ನು ಬಂಧಿಸಿರುತ್ತಾರೆ. ಈ ಪ್ರಕರಣದಲ್ಲಿ ವಾಹನದ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿದಾರನೇ ಅಪರಾಧಿಯಾಗಿರುತ್ತಾನೆ. ವಾಹನದ ಹಿಂದೆ ಕುಳಿತ್ತಿದ್ದ ವ್ಯಕ್ತಿ ಶ್ರೀಗಂಧದ ತುಂಡುಗಳನ್ನು ಇಟ್ಟುಕೊಂಡಿದ್ದಾಗಿಯೂ ಅದು ತನ್ನ ಗಮನಕ್ಕೆ ಬಂದಿರಲಿಲ್ಲವೆಂದು ತಿಳಿಸಿದ್ದು, ಅದು ಸತ್ಯಕ್ಕೆ ದೂರವಾದ ಸಂಗತಿಯಾಗಿರುತ್ತದೆ. ಅರ್ಜಿದಾರರು ಉದ್ದೇಶಪೂರ್ವಕವಾಗಿ ತನ್ನ ವಾಹನದಲ್ಲಿ ಅಕ್ರಮ ಶ್ರೀಗಂಧವನ್ನು ಕಳ್ಳಸಾಗಾಣಿಕೆ ಮಾಡಿರುವುದು ಮೇಲು ನೋಟಕ್ಕೆ ಕಂಡುಬರುತ್ತಿದ್ದು, ಅರ್ಜಿದಾರರು ತಮ್ಮ ಅರ್ಜಿಯಲ್ಲಿ ಕಾಣಿಸಿರುವ ಸಮಜಾಯಿಷಿ ಒಪ್ಪಿಕೊಳ್ಳುವಂತಹ ಸಮಜಾಯಿಷಿ ಆಗಿರುವುದಿಲ್ಲ. ಅರ್ಜಿದಾರರ ವಾಹನವನ್ನು ಮಧ್ಯಂತರ ಅರ್ಜಿಯ ಅಡಿಯಲ್ಲಿ ಬಿಟ್ಟುಕೊಟ್ಟದ್ದೇ ಆದಲ್ಲಿ ಅರ್ಜಿದಾರರು ಪುನ: ತಮ್ಮ ವಾಹನವನ್ನು ಅಕ್ರಮ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ಉಪಯೋಗಿಸುವ ಸಾಧ್ಯತೆ ಹೆಚ್ಚಾಗಿರುತ್ತದೆ ಆದ್ದರಿಂದ ವಾಹನದ ಬಿಡುಗಡೆ ಕೋರಿ ಸಲ್ಲಿಸಿರುವ ಅರ್ಜಿದಾರರ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಬೇಕಾಗಿ ವಿನಂತಿಸಿರುತ್ತಾರೆ.

ಈ ಪ್ರಕರಣದ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ದಿನಾಂಕ:28–07–2004 ರಂದು ವಿಚಾರಣೆ ನಡೆಸಿ ಫಿರ್ಯಾದಿದಾರರು ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲಾತಿಗಳೂ ಅರ್ಜಿದಾರರ ಅರ್ಜಿ ಹಾಗೂ ಅಭಿಯೋಜನಾ ವತಿಯಿಂದ ನೀಡಿದ ಆಕ್ಷೇಪಣಾ ಪತ್ರಗಳನ್ನು ಪರಿಶೀಲಿಸಿದಾಗ ದಿನಾಂಕ: 07–03–2004 ರಂದು ಸುಜುಕಿ ಮ್ಯಾಕ್ಸ್ 100 ಕೆಎ–14–ಹೆಚ್–7118 ರಲ್ಲಿ ಅಕ್ರಮವಾಗಿ ಶ್ರೀಗಂಧ ಸಾಗಾಣಿಕೆ ಆಗಿರುವುದು ಸ್ಪಷ್ಟವಾಗಿ ದೃಢಪಟ್ಟಿರುತ್ತದೆ. ಈ ಬಗ್ಗೆ ವಾಹನದ ಮಾಲೀಕರು ಸಹ ಭಾಗಿಯಾಗಿರುವುದು ಮೇಲುನೋಟಕ್ಕೆ ಕಂಡುಬಂದಿರುತ್ತದೆ. ಅಲ್ಲದೇ ವಾಹನದ ಮಾಲೀಕರನ್ನು ನ್ಯಾಯಾಲಯದ ಬಂಧನಕ್ಕೆ ನೀಡಿರುವುದು ತಿಳಿದುಬಂದಿರುತ್ತದೆ. ಇನ್ನೊಬ್ಬ ಅಪರಾಧಿ ತಪ್ಪಿಸಿಕೊಂಡು ಓಡಿ ಹೋಗಿದ್ದು, ಆತನ ಪತ್ತೆ ಕಾರ್ಯ ನಡೆಯುತ್ತಿದೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಶ್ರೀಗಂಧವು ಕರ್ನಾಟಕ ಅರಣ್ಯ ಕಾಯ್ದೆ ವಿಧಿ 84ರ ಪ್ರಕಾರ ಸರ್ಕಾರದ ಸ್ವತ್ತಾಗಿರುತ್ತದೆ. ಅಲ್ಲದೇ ಈ ಪ್ರಕರಣಕ್ಕೆ ಸಂಬಂಧಪಟ್ಟ ವಾಹನವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಮಾಡಿಕೊಂಡಿದ್ದು, ನಂತರ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ವಾಹನದ ಬಿಡುಗಡೆ ಕೋರಿ ಅರ್ಜಿ ಸಲ್ಲಿಸಿರುತ್ತಾರೆ. ನ್ಯಾಯಾಲಯವು ಮಾನವೀಯತೆ ದೃಷ್ಟಿಯಿಂದ ಅವರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಂಡು ಪರಿಶೀಲಿಸಿರುತ್ತದೆ. ಈ ಸಮಯದಲ್ಲಿ ಅರ್ಜಿದಾರರು ಅವರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ಅರ್ಜಿದಾರರು ಸೃಷ್ಟಿಸಿದ ಕಟ್ಟುಕತೆ ಎಂಬುದು ಮೇಲುನೋಟಕ್ಕೆ ಕಂಡುಬಂದಿರುತ್ತದೆ. ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿ ಆಗಿರುವುದು ಮೇಲುನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ಅರ್ಜಿದಾರರ ವಾಹನ ತಾತ್ಕಾಲಿಕ ಬಿಡುಗಡೆ ಕೋರಿಕೆಯ ಅರ್ಜಿಯನ್ನು ದಿನಾಂಕ: 30–07–2004ರ ಆದೇಶದಲ್ಲಿ ತಿರಸ್ಕರಿಸಿರುತ್ತದೆ. ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಇವರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಕ್ರಿಮಿನಲ್ ಎಂಸ ಅಪೀಲು ನಂ.32/04 ದಿನಾಂಕ: 13–09–2004 ರಂದು ವಾಹನವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗಧಿಪಡಿಸಿದ ಬೆಲೆಯಷ್ಟು ಬ್ಯಾಂಕ್ ಗ್ಯಾರಂಟಿ ಪಡೆದು ತಾತ್ಕಾಲಿಕ ಬಿಡುಗಡೆ ಬಗ್ಗೆ ಆದೇಶ ಹೊರಡಿಸಿರುತ್ತಾರೆ. ಘನ ನ್ಯಾಯಾಲಯದ ಆದೇಶದಂತೆ ವಾಹನ ಮಾಲೀಕರು

ರೂ.3000/–ಗಳ ಠೇವಣಿ ಹಣ ಹಾಗೂ ಇತರೆ ಷರತ್ತಿನ ಬಗ್ಗೆ ಮುಚ್ಚಳಿಕೆ ಬರೆದು ವಾಹನವನ್ನು ವಶಕ್ಕೆ ಪಡೆದಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ:22–06–2005 ರಿಂದ 22–02–2006 ರವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನದ ಮಾಲೀಕರ ಹೇಳಿಕೆಗಳನ್ನು ಸರ್ಕಾರಿ ಅಭಿಯೋಜಕರು ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ರವರ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮ ವಿಚಾರಣೆ ನಡೆಸಲಾಯಿತು. ಪ್ರಾಸಿಕ್ಯೂಷನ್ ಪರವಾಗಿ ದಿನಾಂಕ:13–07–2005 ರಂದು ಶ್ರೀ ಬಿ.ಎಸ್. ಮೋಹನಕುಮಾರ್, ವನಪಾಲಕರು, ಪ್ರಾಸಾ 1 ಎಂದು ದಿನಾಂಕ:03–08–2005 ರಂದು ಶ್ರೀ ಓಂಕಾರಪ್ಪ,. ಅರಣ್ಯ ರಕ್ಷಕ ಇವರನ್ನು ಪ್ರಾಸಾ 2 ಎಂದು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು. ಪ್ರತಿವಾದಿಯ ಪರವಾಗಿ ದಿನಾಂಕ:21–12–2005 ರಂದು ಶ್ರೀ ನಜೀರ್ ಖಾನ್ ಬಿನ್ ಪಾಚಾಖಾನ್ ಸಿದ್ದರಮಟ್ಟಿ, ಭದ್ರಾವತಿ ತಾಲ್ಲೂಕು ಇವರನ್ನು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು. ಪ್ರಾಧಿಕಾರದಲ್ಲಿ ಹಾಜರು ಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಅರ್ಜಿದಾರರ ಪರ ನ್ಯಾಯವಾದಿಗಳು ಮಂಡಿಸಿದ ವಾದ ಅಭಿಯೋಜನಾ ವತಿಯಿಂದ ಮಂಡಿಸಿದ ವಾದ ವಿವಾದವನ್ನು ಆಲಿಸಲಾಯಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರ ಸುಜುಕಿ ಮ್ಯಾಕ್ಸ್ ದ್ವಿಚಕ್ರ ವಾಹನ ಸಂಖ್ಯೆ: ಕೆಎ–14–ಹೆಚ್–7118 ರಲ್ಲಿ ಶ್ರೀಗಂಧದ ತುಂಡುಗಳು 9=4 ಕೆ.ಜಿ.ಯನ್ನು ದಿನಾಂಕ: 08–03–2004 ರಂದು ಕಾನೂನಿಗೆ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ಕಾಯ್ದೆಯಂತೆ 71(ಎ) (1) ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ? ಹಾಗೂ ವಾಹನದ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸಿ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?
4. ಈ ಪ್ರಕರಣದಲ್ಲಿ ಫಿರ್ಯಾದಿದಾರರು ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯ್ದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತು ಪಡಿಸಿದೆಯೇ?
5. ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ.
6. ಏನು ತೀರ್ಮಾನಕ್ಕೆ ಬರಬಹುದಾಗಿದೆ?

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. 1ನೇ ಅಂಶಕ್ಕೆ ಹೌದು ಎಂತಲೂ
2. 2ನೇ ಅಂಶಕ್ಕೆ ಹೌದು ಎಂತಲೂ
3. 3ನೇ ಅಂಶಕ್ಕೆ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಮತ್ತು 3ನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.
4. ನಾಲ್ಕನೇ ಅಂಶಕ್ಕೆ ಹೌದು ಎಂತಲೂ
5. 5ನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಕಾರಣಗಳು**

ಅಂಶ–1

ದಿನಾಂಕ: 08–03–2004 ರಂದು ಭದ್ರಾವತಿ ತಾಲ್ಲೂಕು ಕೂಡ್ಲಿಗೆರೆ ಹೋಬಳಿ, ಭದ್ರಾವತಿ ವಲಯ, ಅರಳಿಹಳ್ಳಿ ಶಾಖೆಯ ಅಂತರಗಂಗೆ ಮನ್ನ ಜಂಗಲಿಗೆ ಸೇರಿದ ದೇವರಹಳ್ಳಿ ಗಸ್ತಿನ ಬೆಳ್ಳಗೆರೆಯಿಂದ ನೇರಲಕೆರೆ ಬಿ.ಆರ್.ಎಲ್.ಬಿ.ಸಿ. ಚಾನಲ್ ಅಕ್ವಿಡೆಟ್‌ಗೆ ಬರುವ ಕಾಲುದಾರಿಯ ಕಾಗೇಹಳ್ಳದ ಮೇಲ್ಭಾಗದಲ್ಲಿ ಅರಳಿ ಹಳ್ಳಿ

ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಅಕ್ರಮವಾಗಿ ಶ್ರೀಗಂಧದ ತುಂಡು ಮತ್ತು ಚಕ್ಕೆ 4 ಕೆ.ಜಿ. ಸಾಗಾಣಿಕೆ ಸಂಬಂಧ ಸುಜುಕಿ–ಮ್ಯಾಕ್ಸ್ ಕೆಎ–14–ಹೆಚ್–7118ನ್ನು ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆಯನ್ನು ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 252/03–04 ನ್ನು ದಾಖಲು ಮಾಡಿ ವಾಹನ ಹಾಗೂ ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದ ಸಮಕ್ಷಮ ದಾಖಲಾತಿಗಳೊಂದಿಗೆ ಹಾಜರುಪಡಿಸಿರುತ್ತಾರೆ.

ಈ ಸಂಬಂಧ ಅಭಿಯೋಜನಾವತಿಯಿಂದ ಮೇಲ್ಕಂಡ ಸಾಕ್ಷಿದಾರರಾದ ಪಿ.ಡಬ್ಲ್ಯೂ1 ಮತ್ತು ಪಿಡಬ್ಲ್ಯೂಯೂ2 ಇವರುಗಳು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿದ್ದು, ಅವರ ಹೇಳಿಕೆ ಪ್ರಕಾರ ದಿನಾಂಕ 08–03–2004 ರಂದು ಬೆಳಿಗ್ಗೆ 5.00 ಗಂಟೆಗೆ ಅಂತರಗಂಗೆ ಮನ್ನಾ ಜಂಗಲಿಗೆ ಗಸ್ತು ಮಾಡಲು 8.00 ಗಂಟೆಗೆ ಹೋದೆವು. ಮನ್ನ ಜಂಗ್ಲಿಯಲ್ಲಿ ನಾವು ಹೋಗುತ್ತಿರುವಾಗ ದ್ವಿಚಕ್ರ ವಾಹನದಲ್ಲಿ ಎರಡು ಜನ ಬರುತ್ತಿದ್ದರು. ನಾವು ನಿಲ್ಲಿಸಲು ಸೂಚನೆ ನೀಡಿದಾಗ ಹಿಂದೆ ಕುಳಿತಿದ್ದ ವ್ಯಕ್ತಿಯು ಅವನು ಹಿಡಿದುಕೊಂಡಿದ್ದ ಪ್ಲಾಸ್ಟಿಕ್ ಚೀಲವನ್ನು ಎಸೆದು ಓಡಿಹೋದ ಆತನನ್ನು ಹಿಡಿಯಲು ಪ್ರಯತ್ನ ಪಟ್ಟಾಗ ಆತ ಕೈಗೆ ಸಿಗಲಿಲ್ಲ. ಬೈಕ್ ಚಾಲನೆ ಮಾಡುತ್ತಿದ್ದ ವ್ಯಕ್ತಿಯನ್ನು ಹಿಡಿದುಕೊಂಡೆವು. ಬೈಕ್‌ನಿಂದ ಎಸೆದ ಪ್ಲಾಸ್ಟಿಕ್ ಚೀಲವನ್ನು ಬಿಚ್ಚಿನೋಡಲಾಗಿ ಶ್ರೀಗಂಧದ ಚಕ್ಕೆಗಳು ಮತ್ತು ತುಂಡುಗಳು ಇದ್ದದ್ದು ಕಂಡು ಬಂದಿತು. ಓಡಿಹೋದ ವ್ಯಕ್ತಿಯನ್ನು ವಿಚಾರಿಸಲಾಗಿ ಆತನು ಮಹಮದ್ ಅಯುಬ್ ಎಂದು ನಾವು ದಸ್ತಗಿರಿ ಮಾಡಿದ ವ್ಯಕ್ತಿಯ ಹೆಸರು ನಜಿರ್ ಖಾನ್ ಆಗಿರುತ್ತದೆ. ಶ್ರೀಗಂಧದ ಬಗ್ಗೆ ಯಾವುದೇ ರಹದಾರಿ ಇರಲಿಲ್ಲ. ಅವುಗಳನ್ನು ಜಂಗ್ಲಿಯಲ್ಲಿ ಕಡಿತಲೆಯಾದ ಶ್ರೀಗಂಧದ ಮರಗಳ ಬೇರುಗಳು ಭೂಮಿಯಲ್ಲಿ ಉಳಿದಿದ್ದು ಅವುಗಳನ್ನು ಅಗೆದು ತೆಗೆದವುಗಳಾಗಿರುತ್ತದೆ ಎಂದು ಹೇಳಿರುತ್ತಾರೆ. ಅವುಗಳನ್ನು ಅಳತೆ ಮಾಡಿರುತ್ತದೆ. 4 ಕೆ.ಜಿ. ತೂಕವಿದ್ದು ಅದರಲ್ಲಿ 9 ಗಂಧದ ತುಂಡುಗಳು ಮತ್ತು ಶ್ರೀಗಂಧದ ಚಕ್ಕೆಗಳು ಇರುತ್ತದೆ. ಹಿಡಿದುಕೊಂಡಿದ್ದ ಬೈಕು ಟಿ.ವಿ.ಎಸ್. ಸುಜುಕಿ ಮೋಟರ್ ಸೈಕಲು ಕೆಎ–14–ಹೆಚ್–7118 ಆಗಿರುತ್ತದೆ. ಶ್ರೀಗಂಧದ ತುಂಡು ಮತ್ತು ಚಕ್ಕೆಯನ್ನು ವಾಹನದ ಸಮೀಪ ವಶಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿರುತ್ತದೆ. ಸದರಿ ಮಹಜರ್ ನಿಶಾನೆ ಪಿ1 ಎಂದು ಗುರುತಿಸಿದ್ದು, ಸಾಕ್ಷಿದಾರರ ಸಹಿಯನ್ನು ಕ್ರಮವಾಗಿ ನಿಶಾನೆ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಲಾಗಿದೆ. ಈ ಸಂಬಂಧ ಅರಣ್ಯ ಮೊಕದ್ದಮೆ ಸಂಖ್ಯೆ:252/03–04 ನ್ನು ದಾಖಲು ಮಾಡಿರುತ್ತಾರೆ. ಸದರಿ ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ2 ಮತ್ತು ಸಾಕ್ಷಿದಾರರ ಸಹಿಯನ್ನು ಪಿ2ಎ ಎಂದು ಗುರುತಿಸಿರುತ್ತದೆ. ಮಾಲುಗಳನ್ನು ವಶಪಡಿಸಿಕೊಂಡ ಬಗ್ಗೆ ಸೀಜರ್ ರಿಪೋರ್ಟ್ ದಾಖಲಿಸಿದ್ದು ಸದರಿ ವರದಿಯನ್ನು ನಿಶಾನೆ ಪಿ3 ಹಾಗೂ ಸಾಕ್ಷಿದಾರರ ಸಹಿಯನ್ನು ಪಿ3ಎ ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಸಾಕ್ಷಿದಾರರು ಸಾಕ್ಷಿನುಡಿದು ನಾವು ಬೈಕ್ ಬರುವುದನ್ನು ಅರ್ಧ ಕಿ.ಮೀ. ದೂರದಿಂದ ನೋಡಿದೆವು. ಬೈಕನ್ನು ಆರೋಪಿಯ ಅಂದರೆ ಅರ್ಜಿದಾರ ಓಡಿಸುತ್ತಿದ್ದ ಸೂಚನೆ ಕೊಟ್ಟ ತಕ್ಷಣ ಬೈಕಿನ ಸವಾರ ಬೈಕನ್ನು ನಿಲ್ಲಿಸಿದ ಪ್ಲಾಸ್ಟಿಕ ಚೀಲವನ್ನು ನಜೀರ್ ಖಾನ್ ಹಿಡಿದುಕೊಂಡಿರಲಿಲ್ಲ. ಬೈಕನ್ನು ಚಲಾಯಿಸುತ್ತಿದ್ದ ವ್ಯಕ್ತಿಗೆ ಓಡಿಹೋಗಲು ಅವಕಾಶಕೊಡಲಿಲ್ಲ. ಓಡಿಹೋದ ವ್ಯಕ್ತಿ ಮಹಮದ್ ಅಯುಬ್ ಎಂದು ಗೊತ್ತಾಯಿತು. ಶ್ರೀಗಂಧದ ತುಂಡುಗಳನ್ನು ಕಾಡಿನಿಂದ ತಂದಿರಬಹುದು. ಅರ್ಜಿದಾರರು ಗ್ರಾಮ ಅರಣ್ಯ ಸಮಿತಿಯ ಸದಸ್ಯರಾಗಿರುತ್ತಾರೆ ಎಂಬುದು ಗೊತ್ತು. ಆತನನ್ನು ನಮ್ಮ ಇಲಾಖೆಯವರೇ ಸಮಿತಿಯ ಸದಸ್ಯನನ್ನಾಗಿ ನೇಮಿಸಿರುತ್ತಾರೆ. ಅರ್ಜಿದಾರರಿಗೆ ಮತ್ತು ಇಲಾಖೆಯವರಿಗೆ ಆತನು ಗ್ರಾಮ ಅರಣ್ಯ ಸಮಿತಿಯ ಸದಸ್ಯನಾಗಿರುವ ಕಾರಣ ಪರಿಚಯವಿರುತ್ತದೆ. ಅರ್ಜಿದಾರರು ತಮ್ಮ ವಾಹನದಲ್ಲಿ ಶ್ರೀಗಂಧದ ಅಕ್ರಮ ಸಾಗಾಣಿಕೆಯನ್ನು ಮಾಡುತ್ತಿರಲಿಲ್ಲ ಎಂದು ಹೇಳುವುದು ಸರಿಯಲ್ಲ. ಹಿಂದೆ ಕುಳಿತಿದ್ದ ವ್ಯಕ್ತಿ ಹಿಡಿದುಕೊಂಡಿದ್ದ ಪ್ಲಾಸ್ಟಿಕ್ ಚೀಲದಲ್ಲಿ ಯಾವ ವಸ್ತುಗಳು ಇದ್ದವು ಎಂಬುದು ಬೈಕ್ ಸವಾರ ಅಂದರೆ ಅರ್ಜಿದಾರರಿಗೆ ಗೊತ್ತಿಲ್ಲ ಎಂದು ಹೇಳುವುದು ಸರಿಯಲ್ಲ. ಅರ್ಜಿದಾರರಿಗೂ ಮತ್ತು ಬೈಕಿನ ಹಿಂಭಾಗದಲ್ಲಿ ಪ್ರಯಾಣಿಸುತ್ತಿದ್ದ ವ್ಯಕ್ತಿಗೂ ಸಂಬಂಧ ಇರುವುದು ತನಿಖೆಯಿಂದ ತಿಳಿದು ಬಂದಿತು. ಸ್ಥಳದಲ್ಲಿಯೇ ಮಹಜರ್‌ನ್ನು ತಯಾರಿಸಲಾಯಿತು. ಕಳ್ಳ ಸಾಗಾಣಿಕೆದಾರರಿಗೂ ಅರ್ಜಿದಾರರಿಗೂ ಯಾವುದೇ ಸಂಬಂಧವಿರುವುದಿಲ್ಲ. ಹಾಗೂ ಸುಳ್ಳು ಸಾಕ್ಷಿಯನ್ನು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಪಿ.ಡಬ್ಲ್ಯೂ–1 ಮತ್ತು ಪಿ.ಡಬ್ಲ್ಯೂ–2 ಸಾಕ್ಷಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಸ್ಥಳ ಮಹಜರ್‌ನಲ್ಲಿರುವ ಅಂಶಗಳಿಗೂ ತಾಳೇ ಹೊಂದಿರುತ್ತದೆ. ಅಲ್ಲದೇ ಎಲ್ಲಾ ಸಾಕ್ಷಿದಾರರು ನೀಡಿದ ಹೇಳಿಕೆಗಳು ಒಂದೇ ಆಗಿದ್ದು ಯಾವುದೇ ವ್ಯತಿರೀಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅರ್ಜಿದಾರರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡು ಮತ್ತು ಚಕ್ಕೆಯು ಸಾಗಾಣಿಕೆ ಆಗಿರುವುದು ಹಾಗೂ ಅರಣ್ಯ ಕಾಯ್ದೆ ಕಾನೂನುಗಳನ್ನು ಉಲ್ಲಂಘನೆ ಮಾಡಿರುವುದು ಸಂಶಯ ರಹಿತವಾಗಿ ರುಜುವಾತು ಪಡಿಸಿರುತ್ತಾರೆ. ಈ ಬಗ್ಗೆ ಅಧಿಕೃತವಾದ ಸಾಕ್ಷ್ಯಧಾರಗಳನ್ನು ಸಹ ನೀಡಿರುತ್ತಾರೆ. ಅದ್ದರಿಂದ ಅಂಶ–1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–2:–**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಸುಜುಕಿ ಮೋಟರ್ ಸಂಖ್ಯೆ:ಕೆಎ–14–ಹೆಚ್–7418 ರ ಮಾಲೀಕರಾದ ಶ್ರೀ ನಜೀರ್ ಖಾನ್ ಬಿನ್ ಪಾಚಾಖಾನ್, ಸಿದ್ದರಮಟ್ಟವಾಸಿ ಗುಡ್ಡದನೇರಲೆ ಕೆರೆ ಇವರು ದಿನಾಂಕ: 22–06–2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿಸಲ್ಲಿಸಿದ್ದು ದಿನಾಂಕ: 28–06–2004 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 71 (ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ದಿನಾಂಕ: 07–07–2004 ರಂದು ಸಮಜಾಯಿಷಿಯನ್ನು ನೀಡಿರುತ್ತಾರೆ. ಅರ್ಜಿದಾರರು ಈ ನ್ಯಾಯಾಲಯಕ್ಕೆ ಹಲವು ಬಾರಿ ಹಾಜರಾಗಿರುತ್ತಾರೆ. ಅವರು ಸಾಕ್ಷಿ ನುಡಿದಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)ಪ್ರಕಾರ ಆರ್.ಸಿ. ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ 2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ–3:–**

ವಾಹನದ ಆರ್.ಸಿ. ಮಾಲೀಕರ ಜಿಪಿಎ ಆದ ಶ್ರೀ ನಜೀರ್ ಖಾನ್ ಬಿನ್ ಪಾಚಾಖಾನ್, ಇವರು ದಿನಾಂಕ:22–06–2004 ರಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ಸಮಜಾಯಿಷಿ ನೀಡಿರುತ್ತಾರೆ. ದಿನಾಂಕ: 02–12–2005 ರಂದು ವಾಹನದ ಮಾಲೀಕರು ನ್ಯಾಯಾಲಯದ ಸಮಕ್ಷಮ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ದಿನಾಂಕ: 07–03–2004 ರಂದು 7 ಗಂಟೆಗೆ ಸಿದ್ದರಮಟ್ಟಿಯಿಂದ ಭದ್ರಾವತಿ ಕಡೆಗೆ ಬರುತ್ತಿದ್ದೆನು. ನಾನು ನನ್ನ ಸುಜುಕಿ ಮೋಟಾರ್ ಸೈಕಲ್‌ನಲ್ಲಿ ಬರುತ್ತಿದ್ದೇನು. ನಾನು ನನ್ನ ಮನೆಯಿಂದ ಭದ್ರಾವತಿ ಕಡೆ ಬರುತ್ತಿದ್ದಾಗ ಒಬ್ಬ ವ್ಯಕ್ತಿ ಕೈ ಚಾಚಿ ನಿಲ್ಲಿಸಿದ. ಅವನನ್ನು ಬೈಕಿನಲ್ಲಿ ಕೂರಿಸಿಕೊಂಡೆ. ಆ ವ್ಯಕ್ತಿ ಯಾರು ಎಂದು ನನಗೆ ಗೊತ್ತಿಲ್ಲ. ಅವನ ಕೈಯಲ್ಲಿ ಒಂದು ಸಣ್ಣ ಚೀಲವಿತ್ತು. ಏನು ಎಂದು ವಿಚಾರಿಸಲಿಲ್ಲ. ನಾನು ದಾರಿಯಲ್ಲಿ ಬರುತ್ತಿದ್ದಾಗ ಅರಣ್ಯ ಇಲಾಖೆಯ ಜೀಪು ಬಂದಿತು. ಅವರನ್ನು ಮಾತನಾಡಿಸಲು ಬೈಕನ್ನು ನಿಲ್ಲಿಸಿದೆ. ನಾನು ಮೋಟಾರ್ ಸೈಕಲ್ ನಿಲ್ಲಿಸಿದ ತಕ್ಷಣ ನನ್ನ ಬೈಕ್‌ನಲ್ಲಿದ್ದ ವ್ಯಕ್ತಿ ಬೈಕನ್ನು ಬಿಟ್ಟು ಇಳಿದು ಓಡಿ ಹೋದ. ಅರಣ್ಯ ಇಲಾಖೆಯವರು ನನಗೆ ಅತ್ಯಂತ ಪರಿಚಿತರು ನನ್ನನ್ನು ಗ್ರಾಮ ಅರಣ್ಯ ಸಮಿತಿಯ ಸದಸ್ಯನನ್ನಾಗಿ ಮಾಡಿದ್ದರು. ನಾನು ಸಮಿತಿಯ ಸದಸ್ಯನಾಗಿ 2–3 ಪ್ರಕರಣಗಳಲ್ಲಿ ಇಲಾಖೆಯವರಿಗೆ ಸಹಾಯ ಮಾಡಿರುತ್ತೇನೆ. ನನ್ನ ಬೈಕಿನಲ್ಲಿ ಕರೆದುಕೊಂಡು ಬರುತ್ತಿದ್ದ ವ್ಯಕ್ತಿಯ ಬಳಿ ಅಕ್ರಮ ಅರಣ್ಯ ಉತ್ಪನ್ನ ಇದೆ ಎಂದು ಗೊತ್ತಿದ್ದ ಪಕ್ಷದಲ್ಲಿ ಆತನನ್ನು ನಾನು ಅರಣ್ಯ ಇಲಾಖೆಗೆ ಹಿಡಿದುಕೊಡುತ್ತಿದ್ದೆ. ನಾನು ಒಬ್ಬ ಗುತ್ತಿಗೆದಾರನಾಗಿದ್ದು, ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡ ಮೋಟಾರು ಬೈಕು ನನ್ನ ವಾಹನವನ್ನು ಯಾವುತ್ತು ಅಕ್ರಮ ಅರಣ್ಯ ಉತ್ಪನ್ನಗಳ ಸಾಗಾಣಿಕೆಗೆ ಬಳಸಿರುವುದಿಲ್ಲ. ಆದ್ದರಿಂದ ನನ್ನ ವಾಹನವನ್ನು ಬಿಡುಗಡೆಗೊಳಿಸಬೇಕೆಂದು ಈ ನ್ಯಾಯಾಲಯದಲ್ಲಿ ವಿನಂತಿಸಿರುತ್ತಾರೆ.

ಅಭಿಯೋಜನಾವತಿಯಿಂದ ಎ.ಪಿ.ಪಿ.ರವರು ನಡೆಸಿದ ಪಾಟೀಸವಾಲಿನಲ್ಲಿ ನನಗೆ ಅರಣ್ಯದ ಬಗ್ಗೆ ಅರಣ್ಯ ಉತ್ಪನ್ನಗಳ ಬಗ್ಗೆ ಉತ್ತಮ ಮಾಹಿತಿ ಇರುವುದರಿಂದ ನನ್ನನ್ನು ಗ್ರಾಮ ಅರಣ್ಯ ಸಮಿತಿ ಸದಸ್ಯನನ್ನಾಗಿ ನೇಮಕ ಮಾಡಿಕೊಂಡಿರುತ್ತಾರೆ. ನನಗೆ ಬೀಟೆ, ತೇಗ, ಶ್ರೀಗಂಧ ಮರಗಳನ್ನು ನೋಡಿ ಗುರುತಿಸುವ ಪರಿಜ್ಞಾನ ಇದೆ. ನನಗೆ ಶ್ರೀಗಂಧದ ಮರದ ವಾಸನೆಯನ್ನು ತಿಳಿದುಕೊಳ್ಳುವ ಪರಿಜ್ಞಾನ ಇರುತ್ತದೆ. ಶ್ರೀಗಂಧದ ಮರವನ್ನು ಕತ್ತರಿಸಿದ ತುಂಡು 3–4 ಅಡಿಯವರೆಗೆ ವಾಸನೆ ಬರುತ್ತದೆ ಎಂದರೆ ನಿಜ. ನನ್ನನ್ನು ಅರಣ್ಯ ಇಲಾಖೆ ಅಧಿಕಾರಿಗಳು ದಸ್ತಗಿರಿ ಮಾಡಿದ ನಂತರ ಭದ್ರಾವತಿ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ನನ್ನ ಬೈಕಿನಲ್ಲಿ ಕುಳಿತಿದ್ದ ವ್ಯಕ್ತಿಯ ಜೊತೆ ಶ್ರೀಗಂಧದ ಕಳ್ಳ ಸಾಗಾಣಿಕೆ ಮಾಡುತ್ತಿದ್ದೇನೆ ಎಂದು ಹೇಳುವುದು ಸರಿಯಲ್ಲ. ಇಲಾಖಾ ಅಧಿಕಾರಿಗಳು ಕೈಚೀಲವನ್ನು ಬಿಚ್ಚಿ ನೋಡಿದಾಗ ಶ್ರೀಗಂಧದ ತುಂಡುಗಳು ಇತ್ತು ಎಂದು ಹೇಳುವುದು ಸರಿ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರ ಅರ್ಜಿ ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆ ಮತ್ತು ಅವರ ವಕೀಲರ ವಾದವನ್ನು ಆಲಿಸಿದಾಗ ಈ ಕೆಳಕಂಡ ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುತ್ತೇನೆ.

1. ಅರ್ಜಿದಾರರು ಅವರ ಹೇಳಿಕೆಯಲ್ಲಿ 7–3–2004 ರಂದು ವಾಹನ ವಶಪಡಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಆದರೆ ವಾಹನ ವಶಪಡಿಸಿಕೊಂಡು ಪ್ರಕರಣ ದಾಖಲು ಮಾಡಿರುವುದು ದಿನಾಂಕ: 08–03–2004 ರಂದು ಆಗಿರುತ್ತದೆ.
2. ಅರ್ಜಿದಾರರು ಬೈಕಿನ ಹಿಂಭಾಗ ಕುಳಿತ್ತಿದ್ದ ವ್ಯಕ್ತಿ ಯಾರೆಂದು ಗೊತ್ತಿಲ್ಲ ಎಂದು ತಿಳಿಸಿದ್ದು, ಆದರೆ ಆತನ ಹೆಸರು ಮಹಮದ್ ಅಯೂಬ್ ಬಿನ್ ಅಬ್ದುಲ್ ರಶೀದ್, ಸಿದ್ದರ ಮಟ್ಟ ವಾಸಿ ದೇವರಹಳ್ಳಿ ಅಂಚೆ ಎಂದು ಇಲಾಖೆಯವರು ಗುರುತಿಸಿದ್ದು ಆತನನ್ನು ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದೆ. ಅಲ್ಲದೇ ಆ ವ್ಯಕ್ತಿ ಅರ್ಜಿದಾರರ ಊರಿನವರೇ ಅಗಿರುವುದರಿಂದ ಅರ್ಜಿದಾರರ ಮಾಹಿತಿಗೆ ಸದರಿ ವ್ಯಕ್ತಿ

ಯಾರೆಂಬುದು ಮೊದಲೇ ಗೊತ್ತಿರುತ್ತದೆ. ಹಾಗೂ ಆತನ ಸಂಗಡ ಸೇರಿ ಅಕ್ರಮ ಶ್ರೀಗಂಧ ಸಾಗಾಣಿಕೆ ಮಾಡಿರುವುದರಲ್ಲಿ ಯಾವುದೇ ಸಂಶಯವಿರುವುದಿಲ್ಲ.

3. ಅರ್ಜಿದಾರರ ವಾಹನದಲ್ಲಿ ಹಿಂದೆ ಕುಳಿತ ವ್ಯಕ್ತಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದು ಎಂದು ಅರ್ಜಿದಾರರು ಒಪ್ಪಿಕೊಂಡಿದ್ದು, ಶ್ರೀಗಂಧದ ವಾಸನೆ ಸುಮಾರು 4 ಅಡಿಗಳಷ್ಟು ದೂರದಿಂದಲೇ ಗೊತ್ತಾಗುತ್ತದೆ ಎಂಬುದಕ್ಕೆ ಹೌದು ಎಂದು ಉತ್ತರ ನೀಡಿದ್ದು ಬೈಕ್‌ನ ಹಿಂಭಾಗದಲ್ಲಿ ಕುಳಿತ ವ್ಯಕ್ತಿ ಶ್ರೀಗಂಧದ ಬೇರು ಚಕ್ಕೆ ಸಾಗಿಸುತ್ತಿರುವುದು ನನಗೆ ಗೊತ್ತಿಲ್ಲ ಎಂದು ಹೇಳುವುದು ನಂಬರು ಬರುವುದಿಲ್ಲ. ಇದೊಂದು ಕಟ್ಟುಕತೆಯಾಗಿರುತ್ತದೆ.

4. ಅರ್ಜಿದಾರರು ಗ್ರಾಮ ಅರಣ್ಯ ಸಮಿತಿಯಲ್ಲಿ ಸದಸ್ಯನಾಗಿರುವುದಾಗಿ ತಿಳಿಸಿದ್ದು ಅರಣ್ಯ ಇಲಾಖೆಯ ಸಿಬ್ಬಂದಿಯವರೆಲ್ಲರೂ ಪರಿಚಸ್ಥರು ಎಂದು ತಿಳಿಸಿರುತ್ತಾರೆ. ಆದ್ದರಿಂದ ಅರ್ಜಿದಾರರಿಗೆ ಇಲಾಖೆಯವರೆಲ್ಲಾ ಗೊತ್ತಿರುವುದರಿಂದ ಶ್ರೀಗಂಧದ ಸಾಗಾಣಿಕೆ ಮಾಡಬೇಕಾದರೆ ಯಾರು ತಡೆದು ಚೆಕ್ ಮಾಡುವುದಿಲ್ಲ ಎಂಬ ಧೈರ್ಯದ ಮೇಲೆ ಈ ಕೃತ್ಯ ಎಸೆಗಿರುವುದರಲ್ಲಿ ಯಾವುದೇ ಸಂಶಯವಿರುವುದಿಲ್ಲ.

5. ಅರ್ಜಿದಾರರು ತಾನು ತಪ್ಪಿತಸ್ಥನಲ್ಲ ಎಂಬುದಕ್ಕೆ ನ್ಯಾಯಾಲಯದಲ್ಲಿ ಯಾವುದೇ ಅಧಿಕೃತವಾದ ಸಾಕ್ಷ್ಯಾಧಾರವನ್ನು ನೀಡಿರುವುದಿಲ್ಲ. ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿ ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದಕ್ಕೊಂದು ಸಂಬಂಧ ಇಲ್ಲದೇ ಒಂದು ಕಟ್ಟು ಕತೆ ಎಂದು ಹೇಳಬಹುದು.

ವಾಹನದ ಮಾಲೀಕರು ಅಥವಾ ಅದರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನವನ್ನು ಸರ್ಕಾರದ ಸೊತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿಯಿಲ್ಲದೇ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಧಾರಗಳನ್ನು ವಾಹನದ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಶ್ರೀಗಂಧದ ತುಂಡುಗಳು, ಚಕ್ಕೆಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅದರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರ ನೀಡಿರುವುದಿಲ್ಲ. ವಾಹನದಲ್ಲಿ ನನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದಕ್ಕೆ ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ) (2) ರೀತ್ಯಾ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ, ಚಾಲಕರಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಅವರುಗಳ ಜವಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool,rope, chain, boat, vehicle or cattle shall be made under section 71A if the owner of the tool,rope,chain,boat,vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool,rope,chain,boat,vehicle or cattle and that each of them had taken all reasonable and necessary precautions against such use."

ಹಾಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿ ಮತ್ತು ನ್ಯಾಯಾಲಯದಲ್ಲಿ ನುಡಿದ ಸಾಕ್ಷಿಗಳನ್ನು ಗಮನಿಸಿದಾಗ ಒಂದಕ್ಕೊಂದು ತಾಳೇ ಇಲ್ಲದೇ ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಒಂದು ಕಟ್ಟುಕತೆ ಎಂದು ಹಾಗೂ ವಾಹನದಲ್ಲಿ ಶ್ರೀಗಂಧದ ತುಂಡುಗಳು ಅಕ್ರಮ ಸಾಗಾಣಿಕೆಯು ವಾಹನದ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯ ಪಡುತ್ತೇನೆ.

ಈ ಮೇಲಿನ ಎಲ್ಲಾ ಕಾರಣಗಳಿಂದ 3ನೇ ಅಂಶದ ಪ್ರಶ್ನೆಗೆ ಮೊದಲನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದು ಎರಡನೇ ಹಾಗೂ 3ನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

**ಅಂಶ–4:**

ದಿನಾಂಕ: 08–03–2004 ರಂದು ಭದ್ರಾವತಿ ತಾಲ್ಲೂಕು, ಕೂಡ್ಲಿಗೆರೆ ಹೋಬಳಿ, ಭದ್ರಾವತಿ ವಲಯ ಅರಳಹಳ್ಳಿ ಶಾಖೆಯ ಅಂತರಗಂಗೆ ಮನ್ನಾಜಂಗಲಿಗೆ ಸೇರಿದ ದೇವರಹಳ್ಳಿ ಗಸ್ತಿನ ಬೆಳ್ಳಗೆರೆಯಿಂದ ನೇರಲೆಕೆರೆ ಬಿ.ಆರ್.ಎಲ್.ಬಿ.ಸಿ. ಚಾನಲ್ ಅಕ್ವಿಡೆಟ್‌ಗೆ ಬರುವ ಕಾಲುದಾರಿಯ ಕಾಗೇಹಳ್ಳದ ಮೇಲ್ಭಾಗದಲ್ಲಿ ಅರಳಹಳ್ಳಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಅಕ್ರಮವಾಗಿ ಶ್ರೀಗಂಧದ ತುಂಡು ಹಾಗೂ ಚಕ್ಕೆ ಒಟ್ಟು 4 ಕೆ.ಜಿ. ಸಾಗಿಸುತ್ತಿದ್ದ ಸುಜುಕಿ ಮ್ಯಾಕ್ಸ್ ಸಂಖ್ಯೆ ಕೆಎ–14–ಹೆಚ್–7118ನ್ನು ಅಪರಾಧಿಗಳ ಸಮೇತ ವಶಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ: 252/2003–04 ನ್ನು ದಾಖಲು ಮಾಡಿರುತ್ತಾರೆ.

ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ ಸೊತ್ತೆಂದು ಭಾವಿಸಬೇಕಾಗಿರುತ್ತದೆ. ಅಪಾದನೆ ಹೊರಿಸಲ್ಪಟ್ಟ

ವ್ಯಕ್ತಿ ಅಮಾನತ್ತು ಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

" When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused. "

ಅರಣ್ಯ ಕಾಯ್ದೆ 1963 ಕಲಂ 84 ರ ಪ್ರಕಾರ ಶ್ರೀಗಂಧವು ಸರ್ಕಾರದ ಸ್ವತ್ತಾಗಿರುತ್ತದೆ.

1. all sandal trees which may grow in any land after the date of the commencement of this Act, and
2. all sandal trees existing on any land prior to the commencement of the Act, 2(***) shall be the exclusive property of the State Government.

3(2) Where in any proceedings taken under this Act, a question arises as to whether any sandalwood is the property of the State Government, it shall, until the contrary is proved, be presumed to be the part of a sandal tree which was the exclusive property of the State Government under sub-section (1), and in the case of any prosecution, the burden of proving the contrary shall lie on the accused.

ಈ ಪ್ರಕರಣದಲ್ಲಿ ಅರ್ಜಿದಾರರು/ವಾಹನದ ಮಾಲೀಕರು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ನಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಶ್ರೀಗಂಧದ ತುಂಡು ಮತ್ತು ಚಕ್ಕೆ ಚೂರುಗಳು 9=4 ಕೆಜಿ.ಯನ್ನು ಅರಣ್ಯ ಕಾಯ್ದೆ 1963 ಕಲಂ 84 ರಂತೆ ಸರ್ಕಾರಿ ಸ್ವತ್ತೆಂದು ರುಜುವಾತಾಗಿರುತ್ತದೆ.

**ಅಂಶ–5:–**

ಅರ್ಜಿದಾರರಿಗೆ ಸೇರಿದ ಸುಜುಕಿ ಮ್ಯಾಕ್ಸ್ ದ್ವಿಚಕ್ರ ವಾಹನ ಕೆಎ–14–ಹೆಚ್–7118 ನ್ನು ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಯನ್ನು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನದ ಮಾಲೀಕರು ಪ್ರತ್ಯಕ್ಷವಾಗಿ ಭಾಗಿಯಾಗಿದ್ದಾರೆಂಬುದು ಸಾಕ್ಷ್ಯಾಧಾರಗಳಿಂದ ರುಜುವಾತಾಗಿರುತ್ತದೆ. ಫಿರ್ಯಾಧಿದಾರರು ಮಾಲುಗಳ ಸಮೇತ ವಾಹನ ಅಮಾನತ್ತು ಪಡಿಸಿದ್ದು ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರಗಳನ್ನು ಅವರು ನೀಡಿರುತ್ತಾರೆ. ಅರ್ಜಿದಾರರು ತಾನು ಮಾಡದೇ ಇರುವ ಅಪಾದನೆಯನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದ ಕಾರಣ, ಅರ್ಜಿದಾರರ ವಾಹನ ಅಕ್ರಮ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಅಲ್ಲದೇ ಅರ್ಜಿದಾರರು ಸಹ ಪ್ರಕರಣದಲ್ಲಿ ನೇರವಾಗಿ ಭಾಗಿ ಅಗಿ ಭಂದಿತರಾಗಿರುತ್ತಾರೆ ಮತ್ತು ಅರ್ಜಿದಾರರನ್ನು ನ್ಯಾಯಾಂಗದ ವಶಕ್ಕೆ ಸಹ ನೀಡಿರುತ್ತದೆ. ಆದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಆದ್ದರಿಂದ ಅಂಶ–5ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನಗಳ ಸಾಗಾಣಿಕೆಯಲ್ಲಿ ಭಾಗವಹಿಸಲು ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೇ ಪ್ರಾಧೀಕಾರಕ್ಕೆ ಹಾಜರುಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿ1ರ ಪ್ರಕಾರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿಗಳಾದ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ 2 ರವರು ಈ ಪ್ರಾಧಿಕಾರದಲ್ಲಿ ಸಾಕ್ಷಿನುಡಿದಂತೆ ಶ್ರೀಗಂಧ (4ಕೆ.ಜಿ)ಯನ್ನು ಸಾಗಿಸಲು ವಾಹನ ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರುಪಡಿಸಿದ ದಾಖಲಾತಿಗಳು ಸಾಕ್ಷ್ಯಾಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲೀ ಇಲ್ಲವೇ ವಾಹನದ ಉಸ್ತುವಾರಿ ದಾರರಾಗಲೀ ವಾಹನವು ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದ್ದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು ಹಾಗೂ ಚಕ್ಕೆಗಳು ಅರಣ್ಯ ಕಾಯ್ದೆ 1963 ಕಲಂ 24, 84, 86, 87, 71(ಎ) ಹಾಗೂ ಅರಣ್ಯ ಕಾನೂನು 1969 ನಿಯಮ 144, 165 ರ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡ ಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ಸುಜುಕಿ ಮ್ಯಾಕ್ಸ್ 100 ಆರ್

ದ್ವಿಚಕ್ರವಾಹನ ನೋಂದಾವಣೆ ಸಂಖ್ಯೆ:ಕೆಎ–14–ಹೆಚ್–7118 (ಇಂಜಿನ್ ನಂ.1505. M552512 ಚಾಸೀಸ್ ನಂ. 1505 F 509261) ಹಾಗೂ ಶ್ರೀಗಂಧದ ತುಂಡು 9 ಮತ್ತು ಚಕ್ಕೆ ಚೂರುಗಳನ್ನು (ಒಟ್ಟು 4 ಕೆ.ಜಿ.) ಸರ್ಕಾರಕ್ಕೆ ಮುಟ್ಟುಗೋಲು ಮಾಡಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸದೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 08–03–2006 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎ. ರಾಧಾದೇವಿ**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 720

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ**
**ಭದ್ರಾವತಿ ವಿಭಾಗ ಭದ್ರಾವತಿ**
**ಸಂಖ್ಯೆ: ಎಫ್‌ಓಸಿ.ಸಿಓಎನ್. ಸಿಆರ್ 19/04–05, ದಿನಾಂಕ: 8ನೇ ಮಾರ್ಚ್ 2006**

| | | |
|---|---|---|
| **ನಿರೂಪಣಾಧಿಕಾರಿ** | : | ಶ್ರೀಮತಿ ಎ. ರಾಧಾದೇವಿ ಭಾಅಸೇ.,<br>ಅಧಿಕಾರಿಯುತ ಅಧಿಕಾರಿಗಳು ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ<br>ಭದ್ರಾವತಿ ವಿಭಾಗ, ಭದ್ರಾವತಿ |
| **ಫಿರ್ಯಾದಿದಾರರು** | : | ವಲಯ ಅರಣ್ಯಾಧಿಕಾರಿ,<br>ತರೀಕೆರೆ ವಲಯ, ತರೀಕೆರೆ |
| **ಅರ್ಜಿದಾರರು** | : | ಕೆ ನಾಗರಾಜ್ ಬಿನ್ ಕಿಟ್ಟಪ್ಪ<br>ರಾಮದೇವ್ರು ಸ್ಟ್ರೀಟ್<br>ತರೀಕೆರೆ ನಗರ |

**ಪ್ರಕರಣದ ಹಿನ್ನೆಲೆ**

ದಿನಾಂಕ 25–12–2004 ರಂದು ಹುಣಸೇಘಟ್ಟ ಶಾಖೆಯ ವನಪಾಲಕ ಮತ್ತು ಇತರೆ ಅರಣ್ಯ ಸಿಬ್ಬಂದಿಯವರು ನಾಗೇನಹಳ್ಳಿ ಗ್ರಾಮ ಠಾಣೆ ವ್ಯಾಪ್ತಿಗೆ ಸೇರಿದ ಹುಣಸೆ ಮರದ ಬಳಿ ವ್ಯಾನು ಸಂಖ್ಯೆ ಕೆಎ– 18–2972 ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ 800 ಹಸಿ ಬಿದಿರು ಗಳಗಳಿಂದ ತಯಾರಿಸಿದ 800 ಬಿದಿರಿನ ಹೂ ಸುತ್ತುಗಳನ್ನು ವಾಹನದ ಸಮೇತ ವಶಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 132/04–05 ನ್ನು ದಾಖಲು ಮಾಡಿರುತ್ತಾರೆ ವಶಪಡಿಸಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಅರಣ್ಯ ಕಾಯಿದೆ 71 (ಎ) ಪ್ರಕಾರ ಕ್ರಮ ಜರುಗಿಸಲು ದಾಖಲಾತಿಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರು ಪಡಿಸಿರುತ್ತಾರೆ. ಸದರಿ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ ವಶಪಡಿಸಿಕೊಂಡ ವಾಹನ ಹಾಗೂ 800 ಬಿದಿರಿನ ರೇಷ್ಮೆ ಸುತ್ತುಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ ತರೀಕೆರೆ ವಲಯ ತರೀಕೆರೆವರ ವಶಕ್ಕೆ ಸುರಕ್ಷತೆಗೆ ಕೊಟ್ಟಿರುತ್ತದೆ.

ದಿನಾಂಕ 29–12–2004 ರಂದು ಶ್ರೀ ಕೆ. ನಾಗರಾಜ ಬಿನ್ ಕಿಟ್ಟಪ್ಪ ತರೀಕೆರೆ ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಕ್ಯಾಂಟರ್ ಲಾರಿ ನಂ ಕೆಎ– 18–2972 ರ ಮಾಲೀಕನಾಗಿರುತ್ತೇನೆ. ಸದರಿ ವಾಹನವನ್ನು ಬಾಡಿಗೆ ನೀಡುವ ಉದ್ದೇಶದಿಂದ ಖರೀದಿಸಿರುತ್ತೇನೆ. ಬಾಡಿಗೆ ಹಣದಿಂದಲೇ ಜೀವನ ನಿರ್ವಹಣೆ ಆಗುತ್ತಿರುತ್ತದೆ ವಾಹನವು ಯಾವುದೇ ಅಪರಾದ ಪ್ರಕರಣದಲ್ಲಿ ಭಾಗಿಯಾಗಿರುವುದಿಲ್ಲ ನನ್ನ ಕಮ್ಮಿ ತಿಳುವಳಿಕೆಯಿಂದ ಈ ಕೃತ್ಯ ಆಗಿರುತ್ತದೆ ನ್ಯಾಯಾಲಯವು ವಿಧಿಸುವ ಯಾವುದೇ ಷರತ್ತಿಗೆ ಬದ್ದನಾಗಿರುವುದಾಗಿ ತಿಳಿಸಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ 13–1–2005 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71 (ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ವಾಹನದ ಮಾಲೀಕರು ವಕೀಲರ ಮುಖಾಂತರ ಸಮಜಾಯಿಸಿ ನೀಡಿರುತ್ತಾರೆ ಅವರ ಸಮಜಾಯಿಸಿಯಲ್ಲಿ ಮೇಲ್ಕಂಡ ಮೊಕದ್ದಮೆಯಲ್ಲಿ ತಾನು ಬಾಗಿಯಾಗಿರುವುದಿಲ್ಲ ತಾನು ವಾಹನವನ್ನು ಬಾಡಿಗೆ ನೀಡಿರುತ್ತೇನೆ. ಬಾಡಿಗೆ ವಾಹನವನ್ನು ದಸ್ತಗಿರಿ ಮಾಡಲಾಗಿರುತ್ತದೆ. ಮಾನ್ಯ ನ್ಯಾಯಾಲಯವು ಯಾವುದೇ ಸಮಯದಲ್ಲಿ ವಾಹನವನ್ನು ಹಾಜರು ಪಡಿಸಲು ಸೂಚಿಸಿದರು ಸಹ ಹಾಜರುಪಡಿಸಲು ಸಿದ್ದನಿರುವುದಾಗಿ ತಿಳಿಸಿ ನ್ಯಾಯಾಲಯವು ಷರತ್ತುಗಳನ್ನು ವಿಧಿಸಿ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ 12–1–2005 ರಂದು ಸಹಾಯಕ ಸರ್ಕಾರಿ ಅಭಿಯೋಜಕರು ಜೆ ಎಂ ಎಫ್‌ಸಿ ನ್ಯಾಯಾಲಯ ಭದ್ರಾವತಿ ಇವರು ಈ ಪ್ರಕರಣದ ಬಗ್ಗೆ ಆಕ್ಷೇಪಣೆ ಸಲ್ಲಿಸಿ, ತರೀಕೆರೆ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಅರ್ಜಿದಾರರಿಗೆ ಸಂಬಂಧಿಸಿದ ಲಾರಿ ಕೆಎ–18–2972 ನ್ನು ಅರಣ್ಯ ಉತ್ಪನ್ನಗಳ ಸಹಿತ ಅಮಾನತ್ತು ಪಡಿಸಿಕೊಂಡಿರುತ್ತಾರೆ. ಅರ್ಜಿದಾರರು ಅವರ ಅರ್ಜಿಯಲ್ಲಿ ತಮ್ಮ ವಾಹನ ಯಾವುದೇ ಅಪರಾಧದಲ್ಲಿ ಭಾಗಿ ಆಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದರೆ ಅದು ಸತ್ಯಕ್ಕೆ ದೂರವಾದ ವಿಷಯವಾಗಿರುತ್ತದೆ. ಈ ಪ್ರಕರಣದ ಬಗ್ಗೆ ಪೂರ ವಿಚಾರಣೆ ಅಗತ್ಯವಿರುತ್ತದೆ. ಮೇಲು ನೋಟಕ್ಕೆ ಅರ್ಜಿದಾರರ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ಕಂಡು ಬಂದಿರುವ ಕಾರಣ, ಅರ್ಜಿದಾರರ ವಾಹನ ಈ ಹಂತದಲ್ಲಿ ಬಿಡುಗಡೆ ಮಾಡುವುದು ಸೂಕ್ತ ವಾಗಿರುವುದಿಲ್ಲ ಅರ್ಜಿದಾರರು ಸಲ್ಲಿಸಿರುವ ಅರ್ಜಿಯನ್ನು ತಿರಸ್ಕರಿಸಬೇಕಾಗಿ ವಿನಂತಿಸಿಕೊಂಡಿರುತ್ತಾರೆ.

ಮೇಲ್ಕಂಡ ಪ್ರಕರಣದಲ್ಲಿ ಫಿರ್ಯಾದಿದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲಾತಿಗಳು ಅರ್ಜಿದಾರರು ಸಲ್ಲಿಸಿದ ಅರ್ಜಿ ಹಾಗೂ ಸಮಜಾಯಿಸಿ ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರು ಸಲ್ಲಿಸಿದ ಆಕ್ಷೇಪಣಾ ಪತ್ರಗಳನ್ನು ಪರಿಶೀಲಿಸಿ ನೋಡಿದಾಗ ತರೀಕೆರೆ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಅಕ್ರಮ 800 ಹಸಿ ಬಿದಿರುಗಳಿಂದ ತಯಾರಿಸಿದ 800 ಬಿದಿರಿನ ಹೂ ಸುತ್ತುಗಳ ಸಾಗಾಣಿಕೆ ಸಂಬಂಧ ಕ್ಯಾಂಟರ್ ವ್ಯಾನು ನಂ ಕೆಎ–18–2972 ನ್ನು ವಶಪಡಿಸಿಕೊಂಡಿರುವುದು ದಾಖಲಾತಿಗಳಿಂದ ದೃಢಪಟ್ಟಿರುತ್ತದೆ. ಸದರಿ ಬಿದಿರಿನ ಹೂ ಸುತ್ತುಗಳು ಸಿದ್ದಪಡಿಸಿದ ವಸ್ತುಗಳಾಗಿರುವುದಾಗಿ ತಿಳಿಸಿರುತ್ತಾರೆ ಆದರೆ ಸದರಿ ಹೂ ಸುತ್ತುಗಳ ಸಾಗಾಣಿಕೆಗೆ ಯಾವುದೇ ರಹದಾರಿ ಇರುವುದಿಲ್ಲ ಸದರಿ ಅರಣ್ಯ ಉತ್ಪನ್ನವನ್ನು ಎಲ್ಲಿಂದ ಯಾರಿಂದ ತೆಗೆದುಕೊಂಡು ಬಂದಿರುತ್ತಾರೆ ಎಂಬುದು ಸಹ ಗೊತ್ತಿರುವುದಿಲ್ಲ ಈ ಪ್ರಕರಣದಲ್ಲಿ ವಾಹನದ ಮಾಲೀಕರ ಪಾತ್ರದ ಬಗ್ಗೆ ಪೂರ್ಣ ವಿಚಾರಣೆ ಹಾಗೂ ತನಿಖೆ ಅಗತ್ಯವಿರುತ್ತದೆ ಅದರೆ ಅರ್ಜಿದಾರರು ವಾಹನದಿಂದಲೇ ಕುಟುಂಬ ಜೀವನ ನಿರ್ವಹಣೆ ಆಗುತ್ತಿದ್ದು ಮತ್ತು ವಾಹನವನ್ನು ಉಪಯೋಗಿಸದೇ ವಲಯ ಅರಣ್ಯಾಧಿಕಾರಿ ಕಛೇರಿ ಬಯಲಿನಲ್ಲಿರುವುದರಿಂದ ವಾಹನವು ಉಪಯೋಗಕ್ಕೆ ಬಾರದಂತೆ ಆಗುತ್ತದೆ ಮತ್ತು ನ್ಯಾಯಾಲಯವು ವಿಧಿಸುವ ಷರತ್ತಿಗೆ ಬದ್ದನಾಗಿರುವುದಾಗಿ ತಿಳಿಸಿ ವಾಹನವನ್ನು ಬಿಡುಗಡೆಗೆ ಕೋರಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಅರ್ಜಿದಾರರ ಅರ್ಜಿ ಹಾಗೂ ಅಭಿಯೋಜನಾ ವತಿಯಿಂದ ನೀಡಿದ ಅಕ್ಷೇಪಣೆಯನ್ನು ಪರಿಶೀಲಿಸಿ ವಾಹನವನ್ನು ಪ್ರಕರಣದ ವಿಚಾರಣೆ ಮುಕ್ತಾಯ ಮಾಡಿ ಅಂತಿಮ ಅದೇಶ ಹೊರಡಿಸುವ ತನಕ ವಲಯ ಅರಣ್ಯಾಧಿಕಾರಿಯವರ ಕಛೇರಿಯ ಬಯಲಿನಲ್ಲಿ ಚಲಿಸದೇ ಇರುವುದರಿಂದ ವಾಹನವು ಉಪಯೋಗಕ್ಕೆ ಬಾರದಂತೆ ಆಗುತ್ತದೆ ಎಂದು ರೂ.10000–00ಠೇವಣಿ ರಶೀದಿ ಪಡೆದು ಷರತ್ತುಗಳ ಬಗ್ಗೆ ಇಂಡೆಮ್ನಿಟಿ ಬಾಂಡ್ ಪಡೆದು ವಾಹನವನ್ನು ತಾತ್ಕಾಲಿಕ ಬಿಡುಗಡೆ ಮಾಡಲು ದಿನಾಂಕ:7–2–2005ರಂದು ಈ ನ್ಯಾಯಾಲಯದಿಂದ ಆದೇಶ ಹೊರಡಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದ ಷರತ್ತುಗಳನ್ನು ಪೂರೈಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ಅಂತಿಮ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ: 7–12–2005 ರಿಂದ 22–2–2006ರತನಕ ಹಲವಾರು ದಿನಾಂಕಗಳಂದು ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾ ವತಿಯಿಂದ ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನದ ಮಾಲೀಕರ ಅರ್ಜಿಗಳನ್ನು ಸರ್ಕಾರಿ ಅಭಿಯೋಜಕರು, ಜೆ ಎಂ ಎಫ್ ಸಿ ನ್ಯಾಯಾಲಯ, ಭದ್ರಾವತಿರವರ ಸಮಕ್ಷಮ ಹಾಗೂ ಅರ್ಜಿದಾರರ ಪರ ವಕೀಲರ ಗೈರು ಹಾಜರಾತಿಯಲ್ಲಿ ವಿಚಾರಣೆ ನಡೆಸಲಾಯ್ತು. ಪ್ರಾಸಿಕ್ಯೂಷನ್ ಪರವಾಗಿ ದಿನಾಂಕ:7–12–05ರಂದು ಶ್ರೀ ಶಿವಪ್ಪ ಬಿನ್ ಹುಚ್ಚರಾಯಪ್ಪ, ವನಪಾಲಕ, ತರೀಕೆರೆ ಇವರನ್ನು ಪ್ರಾ.ಸಾ 1 ಹಾಗೂ ಶ್ರೀ ಗಂಗಣ್ಣ ಬಿನ್ ಸಿದ್ದಯ್ಯ, ನಿವೃತ್ತ ವನಪಾಲಕ ಇವರನ್ನು ಪ್ರಾ.ಸಾ 2 ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಪ್ರತಿ ವಾದಿಯ ಅರ್ಜಿದಾರರು ಹಾಗೂ ಅವರ ಪರ ವಕೀಲರು ಗೈರು ಹಾಜರಾಗಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತು ಸ್ಥಿತಿ ಲಬ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರ ಲಾರಿ ಸಂಖ್ಯೆ ಕೆಎ 18–2972ರಲ್ಲಿ ಕಿರು ಬಿದಿರಿನ ಸುತ್ತುಗಳು ದಿನಾಂಕ:25–12–2004ರಂದು ಕಾನೂನಿಗೆ ವಿರುದ್ದವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ಕಾಯಿದೆ 71(ಬಿ)(1)ರ ಪ್ರಕಾರ ವಾಹನದ ಮಾಲೀಕರವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ವಾಹನದ ಮಾಲೀಕರ ಅಥವಾ ಅವರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ

ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4. ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

5. ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಮತ್ತು ಮೂರನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

4. ನಾಲ್ಕನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಕಾರಣಗಳು**

**ಅಂಶ:1:–**

ದಿನಾಂಕ: 25–12–2004ರಂದು ಹುಣಸೇಘಟ್ಟ ಶಾಖೆಯ ವನಪಾಲಕ ಮತ್ತು ಇತರೆ ಅರಣ್ಯ ಸಿಬ್ಬಂದಿಯವರು ನಾಗೇನಹಳ್ಳಿ ಗ್ರಾಮ ಠಾಣೆ ವ್ಯಾಪ್ತಿಗೆ ಸೇರಿದ ಹುಣಸೇ ಮರದ ಬಳಿ ವ್ಯಾನು ಸಂಖ್ಯೆ ಕೆಎ 18 2972ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ 800 ಹಸಿ ಬಿದಿರು ಗಳಗಳಿಂದ ತಯಾರಿಸಿದ 800 ಬಿದಿರಿನ ಹೂ ಸುತ್ತುಗಳನ್ನು ವಾಹನದ ಸಮೇತ ವಶಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ 132/04–05ನ್ನು ದಾಖಲು ಮಾಡಿರುತ್ತಾರೆ. ವಶಪಡಿಸಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಅರಣ್ಯ ಕಾಯ್ದೆ 71(ಎ) ಪ್ರಕಾರ ಕ್ರಮ ಜರುಗಿಸಲು ದಾಖಲಾತಿಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರು ಪಡಿಸಿರುತ್ತಾರೆ.

ಈ ಸಂಬಂಧ ಅಭಿಯೋಜನಾ ವತಿಯಿಂದ ಮೇಲ್ಕಂಡ ಪ್ರಾಸಿಕ್ಯೂಷನ್ ಸಾಕ್ಷಿದಾರರಾದ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ 2 ಇವರುಗಳು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿದ್ದು ಅವರ ಹೇಳಿಕೆಯ ಪ್ರಕಾರ ದಿನಾಂಕ: 25–12–2004ರಂದು ಖಚಿತ ವರ್ತಮಾನದ ಮೇರೆಗೆ ಇಲಾಖಾ ವಾಹನದಲ್ಲಿ ಅಮೃತಾಪುರ ಹೋಬಳಿ ನಾಗೇನಹಳ್ಳಿ ಗ್ರಾಮದ ಕೊರಚರಹಟ್ಟಿ ಹತ್ತಿರ ಇರುವ ಹುಣಸೇ ಮರದ ಹತ್ತಿರ ಹೋದಾಗ ಅಲ್ಲಿ ಒಂದು ಕ್ಯಾಂಟರ್ ವಾಹನದಲ್ಲಿ ಕೆಲವೊಂದು ವಸ್ತುಗಳನ್ನು ತುಂಬುತ್ತಿರುವುದು ಕಂಡು ಬಂದಿತು. ಹತ್ತಿರ ಹೋಗಿ ನೋಡಲಾಗಿ ಅಲ್ಲಿ ಹಸಿ ಬಿದರಿನಿಂದ ತಯಾರಿಸಿದ ರೇಷ್ಮೆ ಸಾಗಾಣಿಕೆಗೆ ಉಪಯೋಗಿಸುವ ಸುತ್ತುಗಳು ಕಂಡು ಬಂದಿತು. ಸದರಿ ವಸ್ತುಗಳನ್ನು ಸಾಗಿಸಲು ರಹದಾರಿಯನ್ನು ಕೇಳಲಾಗಿ ನಮ್ಮಲ್ಲಿ ರಹದಾರಿ ಇಲ್ಲವೆಂದು ಅವುಗಳನ್ನು ಪಕ್ಕದ ಕಾಡಿನಿಂದ ತಂದ ಬಿದರಿನಿಂದ ತಯಾರಿಸಿದ್ದು ಎಂದು ಹೇಳಿದರು ಅದು ಅರಣ್ಯ ಕಾಯ್ದೆಯ ಉಲ್ಲಂಘನೆಯಾಗಿದ್ದರಿಂದ ಅದನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಳ್ಳಲಾಯಿತು. ವಾಹನದಲ್ಲಿ ತುಂಬಿದ್ದ ವಸ್ತುಗಳನ್ನು ಎಣಿಕೆ ಮಾಡಿ ನೋಡಲಾಗಿ ಒಟ್ಟು 800ಸುತ್ತುಗಳು ಇತ್ತು ಅವುಗಳಿಗೆ 1 ರಿಂದ 800ರವರೆಗೆ ನಂಬರ್ ಕೊಡಲಾಯಿತು. ವಾಹನಕ್ಕೆ 801 ಎಂದು ಸಂಖ್ಯೆ ಕೊಡಲಾಯಿತು. ಲಾರಿ ಸಂಖ್ಯೆ ಕೆಎ 18 2972 ಅಗಿರುತ್ತದೆ. ನಿಸ್ತಂತು ಮೂಲಕ ಕಛೇರಿ ಸಂಪರ್ಕಿಸಿ ಅರಣ್ಯ ಮೊಕದ್ದಮೆ ಸಂಖ್ಯೆ 132/04–05ರಡಿಯಲ್ಲಿ ಮಹಜರನ್ನು ಮಾಡಲಾಯಿತು. ನಿಶಾನೆ ಪಿ1 ಮತ್ತು ಪಿ1ಬಿ ಎಂದು ಗುರುತಿಸಲಾಯಿತು. ನಂತರ ಲಾರಿಯನ್ನು ಅಮಾನತ್ತು ಪಡಿಸಿಕೊಂಡ ವಸ್ತುಗಳ ಸಹಿತ ವಲಯ ಅರಣ್ಯಾಧಿಕಾರಿಗಳ ಕಛೇರಿಗೆ ತರಲಾಯಿತು. ಲಾರಿಯ ವಾಹನ ಚಾಲಕ ಮಹೇಶ ಅಗಿದ್ದು ಅತನ ಜೊತೆಯಲ್ಲಿ ಪ್ರಕಾಶ ಎಂಬ ವ್ಯಕ್ತಿಯು ಇದ್ದು ಅವರುಗಳ ಮೇಲೆ ಪ್ರಕರಣವನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಲ್ಲಿ ಕಳುಹಿಸಿ ಕೊಡಲಾಯಿತು. ಪ್ರಥಮ ಮಾಹಿತಿ ವರ್ತಮಾನ ವರದಿ ನಿಶಾನೆ ಪಿ2 ಅಗಿದ್ದು ಸಾಕ್ಷಿದಾರರ ಸಹಿ ಪಿ2ಎ ಅಗಿರುತ್ತದೆ. ಸೀಜರ್ ರಿಪೋರ್ಟ್ ನಿಶಾನೆ ಪಿ3 ಅಗಿದ್ದು ಸಾಕ್ಷಿದಾರರ ಸಹಿ ಪಿ3ಎ ಅಗಿರುತ್ತದೆ. ಲಾರಿ ಹಾಗೂ ಅಮಾನತ್ತು ಪಡಿಸಿಕೊಂಡ ವಸ್ತುಗಳನ್ನು ನೋಡಿದರೆ ಗುರುತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರು ಹಾಗೂ ಅವರ ಪರ ವಕೀಲರು ಗೈರು ಹಾಜರಾಗಿದ್ದರಿಂದ ಪಾಟೀ ಸವಾಲು ಇಲ್ಲವೆಂದು ತೀರ್ಮಾನಿಸಿರುತ್ತದೆ.

ಮೇಲ್ಕಂಡ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ಸಾಕ್ಷಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಸ್ಥಳ ಮಹಜರ್ ನಲ್ಲಿರುವ ಅಂಶಗಳಿಗೂ ತಾಳೆ ಹೊಂದಿರುತ್ತದೆ. ಅಲ್ಲದೇ ಎಲ್ಲಾ ಸಾಕ್ಷಿದಾರರು ನೀಡಿದ ಹೇಳಿಕೆಗಳು ಒಂದೇ ಆಗಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅರ್ಜಿದಾರರ ವಾಹನದಲ್ಲಿ ಅಕ್ರಮ ಬಿದಿರು ಹೂ ಸುತ್ತುಗಳು ಸಾಗಾಣಿಕೆ ಅಗಿರುವುದು ಹಾಗೂ ಅರಣ್ಯ ಕಾಯ್ದೆ ಕಾನೂನುಗಳನ್ನು ಉಲ್ಲಂಘನೆ

ಮಾಡಿರುವುದು ಸಂಶಯ ರಹಿತವಾಗಿ ರುಜುವಾತು ಪಡಿಸಿರುತ್ತಾರೆ. ಈ ಬಗ್ಗೆ ಅಧಿಕೃತ ಸಾಕ್ಷ್ಯಧಾರಗಳನ್ನು ಸಹ ನೀಡಿರುತ್ತಾರೆ. ಅದ್ದರಿಂದ ಅಂಶ1ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ 2:–**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಮಿನಿ ಲಾರಿ ಸಂಖ್ಯೆ ಕೆಎ 18 2972ರ ಮಾಲೀಕರಾದ ಶ್ರೀ ಕೆ ನಾಗರಾಜ ಬಿನ್ ಕಿಟ್ಟಪ್ಪ, ರಾಮದೇವ್ರು ಸ್ಟ್ರೀಟ್ ತರೀಕೆರೆ ನಗರ ಇವರು ದಿನಾಂಕ:29–12–2004ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು ದಿನಾಂಕ:13–1–2005ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಎ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ದಿನಾಂಕ:15–1–2005ರಂದು ಸಮಜಾಯಿಸಿ ನೀಡಿರುತ್ತಾರೆ. ಅದ ಕಾರಣ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)ಪ್ರಕಾರ ಅರ್ ಸಿ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿ ಕೊಳ್ಳಲು ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ–2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ:3:–**

ವಾಹನದ ಅರ್ ಸಿ ಮಾಲೀಕರಾದ ಶ್ರೀ ಕೆ. ನಾಗರಾಜ ಬಿನ್ ಕಿಟ್ಟಪ್ಪ, ರಾಮದೇವ್ರು ಸ್ಟ್ರೀಟ್, ತರೀಕೆರೆ ನಗರ ಇವರು ದಿನಾಂಕ: 25–12–2004ರಂದು ಈ ಪ್ರಾಧಿಕಾರದಲ್ಲಿ ವಾಹನದ ತಾತ್ಕಾಲಿಕ ಬಿಡುಗಡೆ ಕೋರಿ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ವಾಹನದ ಮಾಲೀಕರು ಸಮಜಾಯಿಸಿ ನೀಡಿರುತ್ತಾರೆ. ಈ ಪ್ರಕರಣದಲ್ಲಿ ವಾಹನದ ತಾತ್ಕಾಲಿಕ ಬಿಡುಗಡೆ ಅರ್ಜಿಯ ಬಗ್ಗೆ ವಿಚಾರಣೆ ನಡೆಸಿ ವಾಹನವು ವಿಚಾರಣೆ ಮುಗಿಯುವ ತನಕ ಇಲಾಖಾ ವಶದಲ್ಲಿ ಚಲಿಸದೇ ನಿಲ್ಲಿಸಿರುವುದರಿಂದ ವಾಹನವು ಉಪಯೋಗಕ್ಕೆ ಬರುವುದಿಲ್ಲ. ಇದರಿಂದ ಸರ್ಕಾರಕ್ಕೆ ಯಾವುದೇ ಅದಾಯ ಇರುವುದಿಲ್ಲ ಎಂದು ಮನಗಂಡು ರೂ. 10000/–ಠೇವಣಿ ಹಣವನ್ನು ಜಂಟೀ ಖಾತೆಯಲ್ಲಿ ಪಡೆದು ಇತರೆ ಷರತ್ತಿನೊಂದಿಗೆ ವಾಹನವನ್ನು ದಿ: 7–2–2005ರ ಅದೇಶದಲ್ಲಿ ತಾತ್ಕಾಲಿಕ ಬಿಡುಗಡೆ ಮಾಡಿರುತ್ತದೆ. ವಾಹನದ ಮಾಲೀಕರು ಎಲ್ಲಾ ಷರತ್ತುಗಳ ಬಗ್ಗೆ ಇಂಡೆಮ್ನಿಟಿ ಬಾಂಡ್ ಹಾಗೂ 10000–00 ರೂ.ಗಳ ಠೇವಣಿ ಹಣವನ್ನು ಬ್ಯಾಂಕ್ ರಶೀದಿ ಮೂಲಕ ನೀಡಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದ ಬಗ್ಗೆ ದಿನಾಂಕ: 7–12–2005 ಹಾಗೂ 22–2–2006ರಂದು ಅಂತಿಮ ಆದೇಶ ಹೊರಡಿಸಲು ವಿಚಾರಣೆ ನಡೆಸಿದ್ದು ಆ ಸಂದರ್ಭದಲ್ಲಿ ವಾಹನದ ಮಾಲೀಕರಿಗೆ ನೋಟೀಸ್ ಜಾರಿ ಮಾಡಿ ನ್ಯಾಯಾಲಯಕ್ಕೆ ಹಾಜರಾಗಲು ತಿಳಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯಕ್ಕೆ ಗೈರು ಹಾಜರಾಗಿರುತ್ತಾರೆ. ಅಲ್ಲದೇ ಅವರ ವಾಹನವನ್ನು ನ್ಯಾಯಾಲಯದ ಸಮಕ್ಷಮ ಹಾಜರು ಪಡಿಸದೇ ನ್ಯಾಯಾಲಯದ ಅದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ಅದ್ದರಿಂದ ಈ ಕೆಳಗಿನ ಅಂಶಗಳನ್ನು ಗಣನೆಗೆ ತೆಗೆದುಕೊಂಡಿರುತ್ತೇನೆ.

1. ಅರ್ಜಿದಾರರು ಹಾಗೂ ಅವರ ಪರ ವಕೀಲರು ನ್ಯಾಯಾಲಯಕ್ಕೆ ಹಾಜರಾಗದೇ ಗೈರು ಹಾಜರಾಗಿ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುತ್ತಾರೆ.
2. ಅರ್ಜಿದಾರರು ದಿ:7–2–2005ರಂದು ಈ ನ್ಯಾಯಾಲಯದಿಂದ ತಾತ್ಕಾಲಿಕವಾಗಿ ಬಿಡುಗಡೆ ಅದೇಶದಂತೆ ಇಂಡೆಮ್ನಿಟಿ ಬಾಂಡ್ ನಲ್ಲಿ ಬರೆದುಕೊಟ್ಟ ಷರತ್ತುಗಳನ್ನು ಉಲ್ಲಂಘನೆ ಮಾಡಿರುತ್ತಾರೆ.
3. ಇಂಡೆಮ್ನಿಟಿ ಬಾಂಡ್ ನಲ್ಲಿರುವ ಷರತ್ತುಗಳಂತೆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಮಾಡಬಹುದಾಗಿರುತ್ತದೆ.
4. ಅರ್ಜಿದಾರರ ವಾಹನ ಅರಣ್ಯ ಅಪರಾದದಲ್ಲಿ ಸಿಲುಕಿದ ನಂತರ ಇದಕ್ಕೆ ಕಾರಣ ರಾದವರ ಮೇಲೆ ಪೋಲೀಸ್ ಠಾಣೆಯಲ್ಲಿ ಫಿರ್ಯಾದು ನೀಡಿರುವುದು ಕಂಡು ಬಂದಿರುವುದಿಲ್ಲ.
5. ಅರ್ಜಿದಾರರ ವಾಹನದಲ್ಲಿ ಪರವಾನಿಗೆಯಿಲ್ಲದ ಸರಕುಗಳು ಸಾಗಾಣಿಕೆ ಅಗಿರುವುದು ಅವರೇ ಅವರ ಅರ್ಜಿಯಲ್ಲಿ ಒಪ್ಪಿಕೊಂಡಿರುತ್ತಾರೆ. ಈ ರೀತಿ ಪರವಾನಿಗೆಯಿಲ್ಲದ ವಸ್ತುಗಳನ್ನು ವಾಹನದಲ್ಲಿ ಹಾಕಬಾರದು ಎಂಬುದನ್ನು ಅವರ ಚಾಲಕನಿಗೆ ತಿಳಿಸಿರಲಿಲ್ಲವೆ? ಅರ್ಜಿದಾರರು ಸಹ ಈ ಕೃತ್ಯದಲ್ಲಿ ನೇರವಾಗಿ ಭಾಗಿ ಅಗಿರುವುದರಲ್ಲಿ ಯಾವುದೇ ಸಂದೇಹ ಇರುವುದಿಲ್ಲ.
6. ಅರ್ಜಿದಾರರ ವಾಹನವು ಪುನ: ದಿನಾಂಕ: 19–11–2005 ರಂದು ತರೀಕೆರೆ ವಲಯದ ಅರಣ್ಯ ಅಪರಾಧ ಪ್ರಕರಣ ಸಂಖ್ಯೆ:127/2005–06ರಲ್ಲಿ ಸಿಲುಕಿ ಅರಣ್ಯ ಸಿಬ್ಬಂದಿಯವರು ವಶ ಪಡಿಸಿಕೊಂಡಿರುವುದು ಈ ನ್ಯಾಯಾಲಯದ ಮಾಹಿತಿಗೆ ಬಂದಿರುತ್ತದೆ.
7. ವಾಹನದ ಮಾಲೀಕರು ಅವರ ವಾಹನದ ಸಂಖ್ಯೆ ಕೆಎ 18 2972 ಪುನ: ಅರಣ್ಯ ಅಪರಾಧ ಪ್ರಕರಣದಲ್ಲಿ ಸಿಲುಕಿದ್ದು ವಾಹನದ ಬಿಡುಗಡೆ ಬಗ್ಗೆ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಅವರ ಅರ್ಜಿಯನ್ನು ಈ ನ್ಯಾಯಾಲಯವು ತಿರಸ್ಕರಿಸಿರುತ್ತದೆ. ಇದರಿಂದ ಅರ್ಜಿದಾರರು ತಮ್ಮ ವಾಹನವನ್ನು ಅಕ್ರಮ ಚಟುವಟಿಕೆಗೋಸ್ಕರ ಮೀಸಲಿಟ್ಟಿರುವುದು ನಿಜವಿರುತ್ತದೆ.

ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧ ಪಟ್ಟವರು ವಾಹನವನ್ನು ಸರ್ಕಾರದ ಸೊತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿಯಿಲ್ಲದೇ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತಮ್ಮ ಗಮನಕ್ಕೆ ಬಾರದಂತೆ ಈ ಕೃತ್ಯವು ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಧಾರಗಳನ್ನು ವಾಹನದ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಬಿದಿರು ಹೂ ಸುತ್ತುಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ಮುಂಜಾಗ್ರತೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರ ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(ಬಿ)(2)ರ ರೀತ್ಯಾ ಸಾಬೀತು ಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕರಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಅವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool,rope, chain, boat, vehicle or cattle shall be made under section 71A if the owner of the tool,rope,chain,boat,vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool,rope,chain,boat,vehicle or cattle and that each of them had taken all reasonable and necessary precautions against such use."

ಹಾಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿರುವ ವಿಚಾರವು ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಒಂದು ಕಟ್ಟು ಕತೆ ಎಂದು ಹಾಗೂ ವಾಹನದಲ್ಲಿ ಬಿದಿರಿನ ಸುತ್ತುಗಳು ಅಕ್ರಮ ಸಾಗಾಣಿಕೆ, ವಾಹನದ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯ ಪಡುತ್ತೇನೆ. ಈ ಮೇಲಿನ ಎಲ್ಲಾ ಕಾರಣಗಳಿಂದ 3ನೇ ಅಂಶದ ಮೊದಲನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದು ಎರಡನೇ ಹಾಗೂ ಮೂರನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

**ಅಂಶ:4:–**

ಅರ್ಜಿದಾರರಿಗೆ ಸೇರಿದ್ ಲಾರಿ ನಂ. ಕೆಎ 18 2972ರಲ್ಲಿ ಸರ್ಕಾರದ ಸೊತ್ತಾದ 800 ಬಿದಿರಿನ ಸುತ್ತುಗಳು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು ವಾಹನದ ಮಾಲೀಕರು ಪ್ರತ್ಯೇಕ್ಷ ಹಾಗೂ ಪರೋಕ್ಷವಾಗಿ ಭಾಗಿಯಾಗಿದ್ದರೆಂಬುದು ಸಾಕ್ಷ್ಯಧಾರಗಳಿಂದ ರುಜುವಾತಾಗಿರುತ್ತದೆ. ಫಿರ್ಯಾದಿದಾರರು ಮಾಲುಗಳ ಸಮೇತ ವಾಹನ ಅಮಾನತ್ತು ಪಡಿಸಿದ್ದು ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯಧಾರಗಳನ್ನು ಹಾಜರು ಪಡಿಸದ ಕಾರಣ ಅರ್ಜಿದಾರರ ವಾಹನ ಅಕ್ರಮ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಅದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಅದ್ದರಿಂದ ಅಂಶ 5ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗವಹಿಸಲು ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ಪ್ರಾಧಿಕಾರಕ್ಕೆ ಹಾಜರು ಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿಡಬ್ಲ್ಯೂ1 ಮತ್ತು ಪಿಡಬ್ಲ್ಯೂ2 ರವರು ಈ ಪ್ರಾಧಿಕಾರದಲ್ಲಿ ಸಾಕ್ಷಿ ನುಡಿದಂತೆ 800 ಬಿದಿರಿನ ಹೂ ಸುತ್ತುಗಳು ಸಾಗಿಸಲು ವಾಹನ ಬಳಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರು ಪಡಿಸಿದ ದಾಖಲಾತಿಗಳು ಸಾಕ್ಷ್ಯಾಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲೀ ಇಲ್ಲವೇ ವಾಹನದ ಉಸ್ತುವಾರಿದಾರರಾಗಲೀ ವಾಹನವು ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿ ಅಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದ್ದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಬಿದಿರಿನ ಸುತ್ತುಗಳು ಅರಣ್ಯ ಕಾಯ್ದೆ 1963 ಕಲಂ 24,50,62,80 ಹಾಗೂ 71(ಎ) ಹಾಗೂ ಅರಣ್ಯ ಕಾನೂನು 1969 ನಿಯಮ 144ರ ವಿರುದ್ದವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ, ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಅದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) (2ನೇ ತಿದ್ದುಪಡಿ)ಪ್ರಕಾರ ನೊಂದಾವಣೆ ಸಂಖ್ಯೆ ಕೆಎ 18 2972 ಮಿನಿ ಲಾರಿ(ಇಂಜಿನ್ ನಂ.140–120274, ಛಾಸೀಸ್ ನಂ.4ಈಸಿ40127825) ಹಾಗೂ 800 ಬಿದಿರಿನ ಸುತ್ತುಗಳು ಸರ್ಕಾರಕ್ಕೆ ಮುಟ್ಟುಗೋಲು ಮಾಡಿ ಅದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಅದೇಶ ಹೊರಡಿಸಿದ 30 ದಿವಸದೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಅದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯ ವಿಲೇವಾರಿ ಮಾಡಲು ಕೂಡ ಅದೇಶಿಸಿದೆ.

ಈ ಆದೇಶವನ್ನು ದಿನಾಂಕ: 8–3–2006ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತದೆ.

**ಎ. ರಾಧಾದೇವಿ**

ಪಿ.ಆರ್. 721

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**ಆಯುಕ್ತರು, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇ ಲಾಖೆ, ಬೆಂಗಳೂರು ಇ ವರ ನಡವಳಿಗಳು**

**ವಿಷಯ:** ಶ್ರೀ ಗೋವಿಂದರಾಜು, ಎ.ದ.ಭೂ ಇ ವರ ಅನಧಿಕೃತ ಗೈರು ಹಾಜರಿ ಮತ್ತು ಕರ್ತವ್ಯಲೋಪದ ಬಗ್ಗೆ.

**ಉಲ್ಲೇಖ :** 1) ಭೂ.ಜಂ.ನಿ ಮೈಸೂರು ಇ ವರ ಪತ್ರದ ಸಂಖ್ಯೆ: ಸಿಬ್ಬಂದಿ.ಶಿಸ್ತು.27/02-03 ದಿನಾಂಕ: 26.05.2004.

2) ಭೂ.ಜಂ.ನಿ ಮೈಸೂರು ರವರ ಕಾರಣ ಕೇಳಿ ನೋಟೀಸ್ ದೋಷಾರೋಪಣೆಗಳೊಂದಿಗೆ ಕ್ರ.ಸಂ.ಸಿಬ್ಬಂದಿ.ಶಿಸ್ತು. ಅಗೈಹಾ.27/2002-03 ದಿನಾಂಕ: 03.09.2003.

3) ಭೂ.ಜಂ.ನಿ ಮೈಸೂರು ರವರ ಎರಡನೇ ಕಾರಣ ಕೇಳಿ ನೋಟೀಸ್ ದಿನಾಂಕ: 09.02.2004 ವಿಚಾರಣಾ ವರದಿ ಪ್ರತಿಯೊಂದಿಗೆ.

4) ಭೂ.ಜಂ.ನಿ ಮೈಸೂರು ರವರ ನೋಟೀಸ್ ದೋಷಾರೋಪಣೆ ಗಳೊಂದಿಗೆ ಸಮಸಂಖ್ಯೆ ದಿನಾಂಕ: 24.12.2002.

5) ಭೂ.ಜಂ.ನಿ ಮೈಸೂರು ರವರ ಎರಡನೇ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ದಿನಾಂಕ: 26.07.2003 ವಿಚಾರಣಾ ವರದಿಯೊಂದಿಗೆ.

6) ಭೂ.ಉ.ನಿ ಹಾಸನ ಇ ವರ ನೋಟೀಸ್ ಆರೋಪಪಟ್ಟಿ ಯೊಂದಿಗೆ ಕ್ರ.ಸಂ.ಸಿಬ್ಬಂದಿ(1) ಶಿಸ್ತು.12/2004-05 ದಿನಾಂಕ: 25.10.2004.

7) ಭೂ.ಉ.ನಿ ಹಾಸನ ಇ ವರ ಎರಡನೇ ಕಾರಣ ಕೇಳಿ ನೋಟೀಸ್ ದಿನಾಂಕ: 20.04.2005 ವಿಚಾರಣಾ ವರದಿಯೊಂದಿಗೆ.

8) ಜಿಲ್ಲಾಧಿಕಾರಿ ಹಾಸನದ ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂ.ಉ.ನಿ ಹಾಸನ ಇ ವರ ಪತ್ರದ ಸಂ:ಸಿಬ್ಬಂದಿ(1)ಶಿಸ್ತು.12/2004-05 ದಿನಾಂಕ:18.8.05.

<u>ಪ್ರಸ್ತಾವನೆ:-</u>

ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ತರೀಕೆರೆ ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರು, ತಿಪಟೂರು ಕಛೇರಿಗಳ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಈಗ ತಹಶೀಲ್ದಾರ್ ಕಡೂರು ಕಛೇರಿಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಗೋವಿಂದರಾಜು ರವರ ವಿರುದ್ಧ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು ಇ ವರು ಎರಡು ಶಿಸ್ತು ಪ್ರಕರಣಗಳನ್ನು ಪ್ರತ್ಯೇಕವಾಗಿ ನಡೆಸಿ ನೌಕರರು ಕಠಿಣ ದಂಡನೆಗೆ ಅರ್ಹರಾಗಿರುತ್ತಾರೆಂದು ಅಭಿಪ್ರಾಯ ಪಟ್ಟು ಅಂತಹ ಅಧಿಕಾರ ಕರ್ನಾಟಕ ಸರ್ಕಾರಿ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ- 9(3) ಅಡಿಯಲ್ಲ ಅವರ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ನಿಯಮ-11, 22(ಎ) ಮೇರೆಗೆ ವಿಚಾರಣಾ ದಾಖಲೆಗಳನ್ನು ಸಕ್ಷಮ ಶಿಸ್ತು ಪ್ರಾಧಿಕಾರಿಯಾದ ಈ ಕಛೇರಿಗೆ ಮುಂದಿನ ಪ್ರಕ್ರಿಯೆಗಾಗಿ ಉಲ್ಲೇಖದಲ್ಲಿನ ಪತ್ರ(1) ರಲ್ಲಿ ಸಲ್ಲಿಸಿರುತ್ತಾರೆ.

ಅಲ್ಲದೆ ಈ ಹಿಂದೆ ತರೀಕೆರೆ ಭೂದಾಖಲೆಗಳ ಸಹಾಯಕ ನಿರ್ದೇಶಕರವರ ವ್ಯಾಪ್ತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಗೋವಿಂದರಾಜು ರವರು ಎಸಗಿರುವ ಕರ್ತವ್ಯಲೋಪ ಹಾಗೂ ಅನಧಿಕೃತ ಗೈರು ಹಾಜರಿ ಬಗ್ಗೆ ಹಿಂದಿನ ಭೂದಾಖಲೆಗಳ ಉಪ ನಿರ್ದೇಶಕರು, ಹಾಸನರವರು ಪ್ರತ್ಯೇಕ ಶಿಸ್ತು ಕ್ರಮ ಪ್ರಾರಂಭಿಸಿ ಭೂಮಾಪನ ಇ ಲಾಖೆಯು ಕಂದಾಯ ಇ ಲಾಖೆಯೊಂದಿಗೆ ಕಾರ್ಯ ವಿಲೀನಗೊಂಡ ಕಾರಣ ದಂಡನೆ ವಿಧಿಸುವ ಅಧಿಕಾರ ದಿನಾಂಕ: 01.05.2005 ರಿಂದ ಅವರ ವ್ಯಾಪ್ತಿಗೆ ಬಾರದೆ ಇ ರುವ ಸಂದರ್ಭದಲ್ಲಿ ವಿಚಾರಣಾ ದಾಖಲೆಗಳನ್ನು ಈ ಕಛೇರಿಗೆ ಮುಂದಿನ ಪ್ರಕ್ರಿಯೆಗಾಗಿ ಉಲ್ಲೇಖ (8)ರ ಪತ್ರದಲ್ಲಿ ಸಲ್ಲಿಸಿರುತ್ತಾರೆ.

ಈ ಮೇಲ್ಕಂಡ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಮತ್ತು ಭೂದಾಖಲೆಗಳ ಉಪ ನಿರ್ದೇಶಕರು, ಹಾಸನ ಇ ವರು ಸಲ್ಲಿಸಿರುವ 03 ವಿಚಾರಣಾ ಕಡತಗಳನ್ನು ಮತ್ತು ಅದರಲ್ಲಿ ಶ್ರೀ ಗೋವಿಂದರಾಜು, ದ್ವಿತೀಯ ದರ್ಜೆ ಭೂಮಾಪಕರ ವಿರುದ್ಧ ನಡೆಸಲಾಗಿರುವ ಇ ಲಾಖಾ ವಿಚಾರಣೆಯ ದಾಖಲೆಗಳನ್ನು ಪರಿಶೀಲಿಸಿದಾಗ,

(1) ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಪ್ರಾರಂಭಿಸಿರುವ ಪ್ರಕರಣದ ಸಂಖ್ಯೆ: ಸಿಬ್ಬಂದಿ.ಶಿಸ್ತು.ಅ.ಗೈ.ಹಾ.27/2002-03 ರಲ್ಲಿ ಶ್ರೀ ಗೋವಿಂದರಾಜುರವರ ವಿರುದ್ಧ ಈ ಕೆಳಕಂಡ ಆರೋಪವನ್ನು ಮಾಡಲಾಗಿ ರುತ್ತದೆ.

**ದೋಷಾರೋಪಣೆ - 1:**

ಭೂದಾಖಲೆಗಳ ಸಹಾಯಕ ನಿರ್ದೇಶಕರು, ತರೀಕೆರೆ ಕಛೇರಿಯಲ್ಲಿ ಎರಡನೇ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಗೋವಿಂದರಾಜು ಆದ ನೀವು ದಿನಾಂಕ: 05.07.2002 ರಿಂದ ಕರ್ತವ್ಯಕ್ಕೆ ಗೈರು ಹಾಜರಾಗಿದ್ದು ಸಕ್ಷಮ ಪ್ರಾಧಿಕಾರಿಯವರಿಂದ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆದಿರುವುದಿಲ್ಲ. ಈ ರೀತಿಯಾಗಿ ಸರ್ಕಾರಿ ನೌಕರರಾದ ನೀವು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 106-ಎ ಪ್ರಕಾರ ಶಿಸ್ತಿನ ಕ್ರಮಕ್ಕೆ ಒಳಗಾಗಿರುತ್ತೀರಿ. ಅಲ್ಲದೆ ಈ ನಿಮ್ಮ ಅನಧಿಕೃತ ಗೈರು ಹಾಜರಿಯು 04 ತಿಂಗಳು ಮೀರಿದ್ದು ಇ ದೇ ನಿಯಮಾವಳಿಯ , ನಿಯಮ-108ನ್ನು ಆಕರ್ಷಿಸುವುದರಿಂದ ಶಿಸ್ತು ಕ್ರಮ ಜರುಗಿ ಸಲು ನೀವೇ ಅವಕಾಶ ನೀಡಿ ಈ ಆರೋಪಕ್ಕೆ ಗುರಿಯಾಗಿರುತ್ತೀರಿ.

ಈ ಆರೋಪದ ಬಗ್ಗೆ ಆಪಾದಿತ ನೌಕರರಿಗೆ ಆರೋಪಪಟ್ಟಿ ಜಾರಿ ಮಾಡಿದ ನಂತರದಲ್ಲಿ ನಡೆದ ಮೊದಲನೇ ವಿಚಾರಣೆಯ ದಿನದಂದೇ ಆಪಾದಿತ ನೌಕರರು ಅವರ ಮೇಲೆ ಮಾಡಲಾಗಿರುವ ಆರೋಪವನ್ನು ಒಪ್ಪಿ ಸಹಿ ಮಾಡಿರುವುದು ಕಂಡು ಬರುತ್ತದೆ. ನಂತರ ವಿಚಾರಣಾ ವರದಿಯೊಂದಿಗೆ ಎರಡನೇ ಕಾರಣ ಕೇಳಿ ನೋಟೀಸನ್ನು ಆಪಾದಿತ ನೌಕರರಿಗೆ ದಿನಾಂಕ: 31.07.03 ರಂದು ಜಾರಿ ಮಾಡಲಾಗಿದ್ದು ಆಪಾದಿತರು ಯಾವುದೇ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದರೆ ಆರೋಪ ಪಟ್ಟಿಗೆ ಉತ್ತರವಾಗಿ ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿ ಆರೋಪದ ಬಗ್ಗೆ ಆಪಾದಿತ ನೌಕರರಿಗೆ ನಾಯಿ ಕಚ್ಚಿದ ಕಾರಣ ಚಿಕಿತ್ಸೆ ಪಡೆಯಬೇಕಾಗಿದ್ದರಿಂದ ಅನಿವಾರ್ಯ ಕಾರಣದಿಂದ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ದಿನಾಂಕ: 08.07.2002 ರಿಂದ 23.07.2002 ರವರೆಗೆ ಪ್ರಾಥಮಿಕ ಆರೋಗ್ಯ ಕೇಂದ್ರ, ಕಡಬ, ಗುಬ್ಬಿ ತಾಲ್ಲೂಕಿನಲ್ಲಿ ನಾಯಿ ಕಡಿತದ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ: 23.07.2002 ರಂದು ವೈದ್ಯಕೀಯ ಪ್ರಮಾಣ ಪತ್ರದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅರ್ಹರಾಗಿದ್ದಾರೆಂದು ಪ್ರಮಾಣೀಕರಿಸಿದ್ದರೂ ಆಪಾದಿತ ನೌಕರರು ದಿನಾಂಕ: 23.07.2002 ರಂದು ಕರ್ತವ್ಯಕ್ಕೆ ಹಾಜರಾಗದೇ ನಂತರ ಜಾಂಡೀಸ್ ರೋಗಕ್ಕೆ ತುತ್ತಾಗಿದ್ದೇನೆಂದು ತಿಳಿಸಿ ದಿನಾಂಕ: 03.03.2003 ರಂದು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿರುವುದು ಕಂಡು ಬರುತ್ತದೆ. ಆ ಕಾರಣ ಪ್ರಕರಣದ ವಿಚಾರಣೆ ನಡೆಸಿದ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಆಪಾದಿತ ನೌಕರರು ಸಕಾಲದಲ್ಲಿ ವೈದ್ಯಕೀಯ ಚಿಕಿತ್ಸೆ ಪಡೆದ ಬಗ್ಗೆ ಮನವಿಯನ್ನು ಸಲ್ಲಿಸದೆ ಕರ್ತವ್ಯಕ್ಕೆ ದಿನಾಂಕ: 05.07.2002 ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಿರುತ್ತಾರೆ.

ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಆಪಾದಿತ ನೌಕರರ ಮೇಲೆ ಮಾಡಲಾಗಿರುವ ಮತ್ತೊಂದು ಕಡತದಲ್ಲಿನ ಇ ಲಾಖಾ ವಿಚಾರಣೆಯಲ್ಲಿ ಆಪಾದಿತ ನೌಕರರು ಈ ಹಿಂದೆ ತಿಪಟೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಮತ್ತು ಅಳತೆ ಕೆಲಸಕ್ಕಾಗಿ ಪಡೆದ ಕಡತಗಳನ್ನು ಕೆಲಸ ನಿರ್ವಹಿಸದೇ ವರ್ಷಗಳ ಕಾಲ ಕಛೇರಿಗೆ ಹಿಂತಿರುಗಿಸದೆ ಇ ರುವ ಆರೋಪಕ್ಕೆ ಸಂಬಂಧಿಸಿದ್ದಾಗಿದ್ದು ಆಪಾದಿತ ನೌಕರರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ತಿಪಟೂರು ವ್ಯಾಪ್ತಿಯಿಂದ ಭೂದಾಖಲೆಗಳ ಸಹಾಯಕ ನಿರ್ದೇಶಕರು, ತರೀಕೆರೆಗೆ ವರ್ಗವಾದ ಕಾರಣ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಂಗಳೂರು ರವರಿಂದ ವ್ಯಾಪ್ತಿ ಮೀರಿದ ಕಾರಣಕ್ಕಾಗಿ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರಿಗೆ ದಾಖಲೆಗಳನ್ನು ಸ್ವೀಕೃತಿಯಾದ ನಂತರ ಈ ಪ್ರಕರಣದಲ್ಲಿನ ಶಿಸ್ತು ಕ್ರಮವು ಆಪಾದಿತ ನೌಕರರು ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರ ವರ ವ್ಯಾಪ್ತಿಯಲ್ಲಿ ಕರ್ತವ್ಯದಲ್ಲಿದ್ದುದರಿಂದ ಪ್ರಾರಂಭಿಸಿ ನಡೆಸಿರುತ್ತಾರೆ. ಆಪಾದಿತರ ಮೇಲೆ ಮಾಡಲಾಗಿರುವ ಆರೋಪಗಳು ಈ ಕೆಳಕಂಡಂತೆ ಇ ರುತ್ತದೆ.

**ದೋಷಾರೋಪಣೆ - 1:**

ಭೂದಾಖಲೆಗಳ ಸಹಾಯಕ ನಿರ್ದೇಶಕರು, ತರೀಕೆರೆ ಕಛೇರಿಯಲ್ಲಿ ಎರಡನೇ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಗೋವಿಂದರಾಜು ಆದ ನೀವು ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ತಿಪಟೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕೆಳಕಂಡ ವಿಭಿನ್ನ ಅವಧಿಗಳಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತೀರಿ.

| | | |
|---|---|---|
| (1) | ದಿ: 12.10.98 ರಿಂದ 24.01.99 ರವರೆಗೆ | 105 ದಿನಗಳು |
| (2) | ದಿ: 01.03.99 ರಿಂದ 27.05.99 ರವರೆಗೆ_ | 88 ದಿನಗಳು |
| (3) | ದಿ: 06.12.99 ರಿಂದ 06.02.2000 ರವರೆಗೆ | 62 ದಿನಗಳು |
| (4) | ದಿ: 27.03.2000 ರಿಂದ 29.10.2000 ರವರೆಗೆ | 217 ದಿನಗಳು |
| | ಒಟ್ಟು | 472 ದಿನಗಳು |

ಈ ಮೇಲ್ಕಾಣಿಸಿದ ಅವಧಿಯ ಬಗ್ಗೆ ಸಕ್ಷಮ ಪ್ರಾಧಿಕಾರಿಯವರಿಂದ ರಜೆಯ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆದಿರುವುದಿಲ್ಲ. ಸರ್ಕಾರಿ ನೌಕರರಾದ ನೀವು ಈ ರೀತಿಯಾಗಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗುವುದು ನಿಯಮ ಬಾಹಿರವಾಗಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ-106(ಎ)ಯ ಪ್ರಕಾರ ದುರ್ನಡತೆಯ ಅಪರಾಧವನ್ನೆಸಗಿರುತ್ತೀರಿ. ಅಲ್ಲದೆ ದಿನಾಂಕ: 27.03.2000 ದಿಂದ 29.10.2000ದ ವರೆಗಿನ ಗೈರು ಹಾಜರಿಯು 04 ತಿಂಗಳು ಮೀರಿರುವುದರಿಂದ ಇ ದೇ ನಿಯಮಾವಳಿಯ ನಿಯಮ-108 ನ್ನು ಆಕರ್ಷಿಸುವುದು. ಆದುದರಿಂದ ಈ ನಿಮ್ಮ ದುರ್ನಡತೆಗಳಿಂದಾಗಿ ಶಿಸ್ತು ಕ್ರಮ ಜರುಗಿಸಲು ನೀವೇ ಅವಕಾಶ ಮಾಡಿ ಈ ಆರೋಪಕ್ಕೆ ಗುರಿಯಾಗಿರುತ್ತೀರಿ.

**ದೋಷಾರೋಪಣೆ - 2:**

ಶ್ರೀ ಗೋವಿಂದರಾಜು, ಎರಡನೇ ದರ್ಜೆ ಭೂಮಾಪಕರಾದ ನೀವು ಹಿಂದೆ ತುರುವೇಕೆರೆ ತಾಲ್ಲೂಕು ಭೂಮಾಪನ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ:-

(1) ಲಗತ್ತು ತ:ಖ್ತೆ (1) ರಲ್ಲಿನ ವಿವರದಂತೆ ಕಛೇರಿಯಿಂದ ಸೆಪ್ಟೆಂಬರ್ 99 ರಲ್ಲಿ ಪಡೆದ ಕಡತಗಳಲ್ಲಿ, ದಿನಚರಿ ಹಚ್ಚಿದ 08 ಕಡತಗಳನ್ನು 15 ತಿಂಗಳ (1 ವರ್ಷ 3 ತಿಂಗಳು) ನಂತರ ಕಛೇರಿಗೆ ಹಿಂತಿರುಗಿಸಿರುತ್ತೀರಿ.

(2) ಲಗತ್ತು ತ:ಖ್ತೆ (2) ರಲ್ಲಿನ ವಿವರದಂತೆ ಜುಲೈ 98 ಮತ್ತು ಸೆಪ್ಟೆಂಬರ್ 99ರಲ್ಲಿ ಪಡೆದ 02 ಕಡತಗಳನ್ನು ದಿನಚರಿಗೆ ಹಚ್ಚದೆ, ಕಛೇರಿಗೂ ಹಿಂದಿರುಗಿಸದೇ ನಿಮ್ಮ ಬಳಿಯೇ ಬಾಕಿ ಇ ಟ್ಟುಕೊಂಡಿರುತ್ತೀರಿ.

(3) ಲಗತ್ತು ತ:ಖ್ತೆ (3) ರಲ್ಲಿನ ವಿವರದಂತೆ, ಜುಲೈ 98, ಸೆಪ್ಟೆಂಬರ್ 99, ಅಕ್ಟೋಬರ್ 99 ಮತ್ತು ನವೆಂಬರ್ 99 ರಲ್ಲಿ ಪಡೆದ 21 ಕಡತಗಳನ್ನು ಯಾವುದೇ ಕೆಲಸ ನಿರ್ವಹಿಸದೆ 09 ತಿಂಗಳಿಂದ 02 ವರ್ಷ 05 ತಿಂಗಳ ವರೆಗೂ ನಿಮ್ಮ ಬಳಿಯೇ ಬಾಕಿ ಇ ಟ್ಟುಕೊಂಡು ಅತೀ ವಿಳಂಬವಾಗಿ ಕಛೇರಿಗೆ ಹಿಂತಿರುಗಿಸಿರುತ್ತೀರಿ.

(4) ಲಗತ್ತು ತ:ಖ್ತೆ (4) ರಂತೆ, 02 ಕಡತಗಳನ್ನು ಕಛೇರಿಯಿಂದ ವಿತರಣಾ ವಹಿಯಲ್ಲಿ ವಿತರಿಸಿಲ್ಲವಾದರೂ, ನೀವು ಅಕ್ಟೋಬರ್ 99ರ ಮಾಹೆಯಲ್ಲಿ ದಿನಚರಿ ಹಚ್ಚಿದ್ದು ಕಛೇರಿಗೆ ಹಿಂತಿರುಗಿಸಿರುವುದಿಲ್ಲ. ಆದುದರಿಂದ ಇ ದು ಸುಳ್ಳು ದಿನಚರಿ ಎಂದು ವ್ಯಕ್ತವಾಗುತ್ತದೆ.

ಮೇಲ್ಕಂಡಂತೆ ನೀವು ದಿನಚರಿ ಹಚ್ಚಿದ ಕಡತಗಳನ್ನು ಪೂರ್ಣಗೊಳಿಸಿ ಸಕಾಲದಲ್ಲಿ ಕಛೇರಿಗೆ ಹಿಂತಿರುಗಿಸದೆ ಅತೀ ವಿಳಂಬವಾಗಿ ಹಿಂತಿರುಗಿಸಿರುತ್ತೀರಿ. ದಿನಚರಿ ಹಚ್ಚದೇ ಇ ರುವ ಕಡತಗಳಲ್ಲಿ ಯಾವುದೇ ಕೆಲಸಗಳನ್ನು ನಿರ್ವಹಿಸದೆ ಧೀರ್ಘಕಾಲ ನಿಮ್ಮ ಬಳಿಯೇ ಬಾಕಿ ಉಳಿಸಿಕೊಂಡು ಅತೀ ವಿಳಂಬವಾಗಿ ಕಛೇರಿಗೆ ಹಿಂತಿರುಗಿಸಿರುತ್ತೀರಿ. ದಿನಚರಿ ಹಚ್ಚದೇ ಇ ರುವ 02 ಕಡತಗಳನ್ನು ಕಛೇರಿಗೆ ಹಿಂತಿರುಗಿಸಿರುವುದಿಲ್ಲ. 02 ಕಡತಗಳನ್ನು ಸುಳ್ಳು ದಿನಚರಿ ಹಚ್ಚಿರುತ್ತೀರಿ. ಈ ರೀತಿಯಾಗಿ ಸಾರ್ವಜನಿಕರ ಕಡತಗಳನ್ನು ದೀರ್ಘಕಾಲ ನಿಮ್ಮ ಬಳಿ ಬಾಕಿ ಇ ಟ್ಟುಕೊಂಡು ಕೆಲಸ ಕಾರ್ಯಗಳಿಗೆ ಅಡಚಣೆ ಉಂಟು ಮಾಡಿರುವುದು ಅಲ್ಲದೆ ಇ ಲಾಖಾ ಸುತ್ತೋಲೆ ಸೂಚನೆಗಳನ್ನು ಉಲ್ಲಂಘಿ ಸಿರುತ್ತೀರಿ. ಸರ್ಕಾರಿ ನೌಕರರಾದ ನೀವು ಈ ರೀತಿ ನೀವು ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ತೋರಿ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಾವಳಿ - 1966 ರ ನಿಯಮ-3(i)(ii) ಮತ್ತು (iii)ನ್ನು ಉಲ್ಲಂಘಿ ಸಿ ಶಿಸ್ತು ಕ್ರಮ ಜರುಗಿಸಲು ನೀವೇ ಅವಕಾಶ ಮಾಡಿ ಈ ಆರೋಪಕ್ಕೆ ಗುರಿಯಾಗಿರುತ್ತೀರಿ.

ದೋಷಾರೋಪಣೆಯನ್ನು ಆಪಾದಿತ ನೌಕರರು ದಿನಾಂಕ: 09.09.03 ರಂದು ಸ್ವೀಕರಿಸಿರುತ್ತಾರೆ. ಆರೋಪದ ಬಗ್ಗೆ ಯಾವುದೇ ರಕ್ಷಣೆ ಹೇಳಿಕೆಯನ್ನು ಸಲ್ಲಿಸದೇ ಇ ದ್ದುದರಿಂದ ಶಿಸ್ತು ಪ್ರಾಧಿಕಾರವಾದ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರೇ ವಿಚಾರಣೆಗೆ ಗೊತ್ತುಪಡಿಸಿದ ದಿನಾಂಕದಿಂದ 24.11.03 ರಂದು ಆಪಾದಿತರು ಹಾಜರಾಗಿ ಅವರ ಮೇಲೆ ಮಾಡಲಾಗಿರುವ ಆರೋಪಗಳನ್ನು ಒಪ್ಪಿಕೊಂಡು ಈ ಬಗ್ಗೆ ಯಾವುದೇ ವಾದವನ್ನು ಮಂಡಿಸಲು ಅಪೇಕ್ಷಿಸುವುದಿಲ್ಲ ಎಂದು ಮೌಖಿಕ ಹೇಳಿಕೆಯಲ್ಲಿ ತಿಳಿಸಿರುವುದು ದಾಖಲೆಗಳಿಂದ ಕಂಡು ಬರುತ್ತದೆ. ಈ ಬಗ್ಗೆ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ವಿಚಾರಣಾ ಪ್ರತಿಯೊಂದಿಗೆ ಎರಡನೇ ಕಾರಣ ಕೇಳಿ ನೋಟೀಸನ್ನು ಕಳುಹಿಸಿದ್ದು ಅದನ್ನು ಆಪಾದಿತ ನೌಕರರು ದಿನಾಂಕ: 12.02.2004 ರಂದು ಸ್ವೀಕರಿಸಿ ಯಾವುದೇ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲದಿರುವುದು ದಾಖಲೆಗಳಿಂದ ಕಂಡು ಬರುತ್ತದೆ.

ಈ ಪ್ರಕರಣದಲ್ಲಿ ಆಪಾದಿತರ ವಿರುದ್ಧ ಮಾಡಲಾಗಿರುವ ಆರೋಪದಂತೆ ಆಪಾದಿತ ನೌಕರರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ತಿಪಟೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರಾತಿಯನ್ನು ಪಡೆಯದೇ, ಪೂರ್ವಾನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ಹಾಗೂ ಗೈರು ಹಾಜರಿ ಅವಧಿ ವಿವಿಧ ಅವಧಿಗೆ ಸಂಬಂಧಿಸಿದ್ದು ಒಂದು ಅವಧಿಯಲ್ಲಿ 216 ದಿನಗಳಿಗೆ ಮೇಲ್ಪಟ್ಟು ಇ ನ್ನೊಂದು ಅವಧಿಯಲ್ಲಿ 105 ದಿನಗಳಿಗೆ ಮೇಲ್ಪಟ್ಟು ಒಟ್ಟಾರೆ 476 ದಿನಗಳಿಗೂ ಮೇಲ್ಪಟ್ಟು ಗೈರು ಹಾಜರಾಗಿರುವುದು ಕಂಡು ಬರುತ್ತದೆ. ಇ ದೇ ಪ್ರಕರಣದಲ್ಲಿ ಎರಡನೇ ಆರೋಪದಲ್ಲಿ ಮಾಡಿರುವ ಆರೋಪದಂತೆ ಆಪಾದಿತ ನೌಕರರು 08 ಕಡತಗಳನ್ನು ದಿನಚರಿ ಹಚ್ಚಿ ಒಂದು ವರ್ಷದ ನಂತರ ಕಛೇರಿಗೆ ಹಿಂತಿರುಗಿಸಿರುತ್ತಾರೆ. 02 ಕಡತಗಳನ್ನು ದಿನಚರಿಗೆ ಹಚ್ಚದೆ ಕಛೇರಿಗೆ ಹಿಂತಿರುಗಿಸದೆ 1998-99 ನೇ ಸಾಲಿನಲ್ಲಿ ಪಡೆದ ಕಡತಗಳಾಗಿರುತ್ತವೆ. 1998-99 ನೇ ಸಾಲಿನಲ್ಲಿ 21 ಕಡತಗಳನ್ನು ಯಾವುದೇ ಕೆಲಸ ನಿರ್ವಹಿಸದೆ 09 ತಿಂಗಳಿಂದ 02 ವರ್ಷಗಳಿಗೂ ಮೇಲ್ಪಟ್ಟು ಅವರ ಬಳಿಯೇ ಇ ಟ್ಟುಕೊಂಡು ಕಛೇರಿಗೆ ಹಿಂತಿರುಗಿಸಿರುತ್ತಾರೆ. ಆ ಕಾರಣ ಅವರು ಸರ್ಕಾರಿ ಕೆಲಸದಲ್ಲಿ ನಿರ್ಲಕ್ಷತೆ ತೋರಿರುವುದಲ್ಲದೆ ಸಾರ್ವಜನಿಕರಿಗೆ ಸಂಬಂಧಿಸಿದ ಕಡತವನ್ನು ಕಛೇರಿಗೆ ಹಿಂದಿರುಗಿಸದೇ, ಕೆಲಸ ನಿರ್ವಹಿಸದೇ ಸಾರ್ವಜನಿಕರಿಗೆ ಅಡಚಣೆಯಾಗಲು ಕಾರಣರಾಗಿ ಇ ಲಾಖೆ ಸುತ್ತೋಲೆಯಲ್ಲಿನ ಸೂಚನೆಗಳನ್ನು ಕಡೆಗಣಿಸಿರುತ್ತಾರೆ. ಆ ಕಾರಣ ವಿಚಾರಣೆ ನಡೆಸಿದ ಶಿಸ್ತು ಪ್ರಾಧಿಕಾರಿ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಆಪಾದಿತ ನೌಕರರು ಕರ್ತವ್ಯದಲ್ಲಿ ಆಸಕ್ತಿ ಹೊಂದಿಲ್ಲವೆಂದು ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವ ಹಿನ್ನೆಲೆಯಲ್ಲಿ ಕಠಿಣ ದಂಡನೆಗೆ ಅರ್ಹರಿರುವುರೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಭೂದಾಖಲೆಗಳ ಉಪ ನಿರ್ದೇಶಕರು, ಹಾಸನ ವ್ಯಾಪ್ತಿಯಲ್ಲಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ತರೀಕೆರೆ ಕಛೇರಿಯಲ್ಲಿ ಆಪಾದಿತ ನೌಕರರು ಕರ್ತವ್ಯದಲ್ಲಿದ್ದಾಗ ಅವರ ವಿರುದ್ಧ ಭೂದಾಖಲೆಗಳ ಉಪ ನಿರ್ದೇಶಕರು, ಹಾಸನ ರವರು ಶಿಸ್ತು ಕ್ರಮ ಪ್ರಾರಂಭಿಸಿರುತ್ತಾರೆ. ಅದರಂತೆ ಆಪಾದಿತ ನೌಕರರನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು. ಚಿಕ್ಕಮಗಳೂರು ಕಛೇರಿಗೆ ಕರ್ತವ್ಯ ನಿರ್ವಹಿಸಲು ನಿಯೋಜಿಸಿದ ಸಂದರ್ಭದಲ್ಲಿ ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಆಪಾದಿತರ ಮೇಲೆ ಮಾಡಲಾದ ಆರೋಪಗಳು ಈ ಕೆಳಕಂಡಂತೆ ಇ ದೆ:-

**ದೋಷಾರೋಪಣೆ - 1:**

ಶ್ರೀ ಗೋವಿಂದರಾಜು, ದ್ವಿತೀಯ ದರ್ಜೆ ಭೂಮಾಪಕರು ಆದ ನೀವು ಈ ಹಿಂದೆ ದಿನಾಂಕ: 02.12.2003 ರಿಂದ 12.04.2004ರ ಅವಧಿಯಲ್ಲಿ ನಿಮ್ಮನ್ನು ನಿಯೋಜಿಸಿದ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿಕ್ಕಮಗಳೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸದೆ ಅನಧಿಕೃತ ಗೈರು ಹಾಜರಾಗಿ ತೀವ್ರತರವಾದ ಕರ್ತವ್ಯ ಲೋಪವನ್ನೆಸಗುವ ಮೂಲಕ

ಕರ್ನಾಟಕ ನಾಗರೀಕ ಸೇವೆ(ನಡತೆ) ನಿಯಮಗಳು-1966ರ ನಿಯಮ-1 ರಿಂದ 3 ಅನ್ನು ಉಲ್ಲಂಘಿ ಸಿ ಶಿಸ್ತು ಕ್ರಮಕ್ಕೆ ಅನುವು ಮಾಡಿಕೊಟ್ಟಿರುತ್ತೀರಿ. ಆದ್ದರಿಂದ ಈ ಆರೋಪ.

ಭೂದಾಖಲೆಗಳ ಉಪ ನಿರ್ದೇಶಕರು, ಹಾಸನ ಇ ವರು ಹೊರಡಿಸಿರುವ ದಿನಾಂಕ: 25.10.2004ರಂದು ಆರೋಪ ಪಟ್ಟಿಯನ್ನು ದಿನಾಂಕ: 28.10.2004 ರಂದು ಸ್ವೀಕರಿಸಿರುತ್ತಾರೆ. ಇ ದಕ್ಕೆ ಉತ್ತರವಾಗಿ ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿ ಇ ನ್ನು ಮುಂದೆ ಯಾವುದೇ ತಪ್ಪನ್ನು ಮಾಡುವುದಿಲ್ಲವೆಂದು, ಕ್ಷಮಿಸಬೇಕೆಂದು, ಗೈರು ಹಾಜರಿ ಅವಧಿಗೆ ರಜೆ ಮಂಜೂರಿ ಮಾಡಿಸಿ ಕೊಡಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ವಿಚಾರಣೆ ನಡೆಸಿದ ಭೂದಾಖಲೆಗಳ ಉಪ ನಿರ್ದೇಶಕರು, ಹಾಸನ ರವರು ಆಪಾದಿತರ ಮೇಲೆ ಮಾಡಲಾಗಿರುವ ಆರೋಪವಾದ ದಿನಾಂಕ: 02.12.2003 ರಿಂದ 12.04.2004 ರವರೆಗಿನ ಅನಧಿಕೃತ ಗೈರು ಹಾಜರಿ ಸಾಕ್ಷ್ಯಾಧಾರಗಳಿಂದ ಸಾಬೀತಾಗಿದೆ ಎಂದು ತಿಳಿಸಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಆರೋಪಿತ ನೌಕರರಿಗೆ ದಿನಾಂಕ: 23.04.2005 ರಂದು ಜಾರಿ ಮಾಡಿರುತ್ತಾರೆ. ಈ ನೋಟೀಸಿಗೆ ಆರೋಪಿತ ನೌಕರರು ಯಾವುದೇ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸದಿರುವ ಅಂಶ ದಾಖಲೆಗಳಿಂದ ಕಂಡು ಬರುತ್ತದೆ. ಈ ಮೇಲೆ ಪ್ರಸ್ತಾಪಿಸಿರುವಂತೆ 03 ಪ್ರಕರಣಗಳು ಆಪಾದಿತ ನೌಕರರಿಗೆ ಸಾಕಷ್ಟು ಕಾಲಾವಕಾಶವನ್ನು ಪ್ರತಿರಕ್ಷಣೆ ಬಗ್ಗೆ ಅವಕಾಶ ಮಾಡಿಕೊಟ್ಟಿದ್ದರೂ, ಆಪಾಧಿತ ನೌಕರರು ವಿಚಾರಣಾ ವರದಿಯೊಂದಿಗೆ ಕಳುಹಿಸಲಾಗಿರುವ ಎರಡನೇ ಕಾರಣ ಕೇಳಿ ನೋಟೀಸಿಗೆ ಯಾವುದೇ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ ಹಾಗೂ ಮೇಲ್ಕಂಡಂತೆ ವಿಚಾರಣೆ ಸಮಯದಲ್ಲಿ ಅವರ ಮೇಲೆ ಮಾಡಲಾಗಿರುವ ಆರೋಪಗಳನ್ನು ಪ್ರಥಮ ಮೌಖಿಕ ವಿಚಾರಣೆ ಸಂದರ್ಭದಲ್ಲಿ ಒಪ್ಪಿಕೊಂಡಿರುವ ಅಂಶ ಹಾಗೂ ಮೂರನೇ ಪ್ರಕರಣದಲ್ಲಿ ಆರೋಪ ಸಾಬೀತಾಗಿರುವ ಅಂಶ ಇ ವುಗಳನ್ನೆಲ್ಲ ಪರಿಶೀಲಿಸಿದಾಗ ಆಪಾದಿತ ನೌಕರರಿಗೆ ಸರ್ಕಾರಿ ಕೆಲಸದಲ್ಲಿ ಶ್ರದ್ಧೆ, ಕರ್ತವ್ಯ ನಿಷ್ಠೆ ಇ ಲ್ಲದಿರುವುದು ಕಂಡು ಬರುತ್ತದೆ. ಆರೋಪಿತ ನೌಕರರು ಈ ಇ ಲಾಖೆಯಲ್ಲಿ ಸರ್ಕಾರಿ ಸೇವೆಗೆ ದಿನಾಂಕ: 28.12.1994 ರಂದು ಸೇರಿದ್ದು 02 ವರ್ಷಗಳ ಖಾಯಂ ಪೂರ್ವಾವಧಿ ಒಳಗಡೆ ಹುದ್ದೆಗೆ ನಿಗಧಿಪಡಿಸಿರುವ ಇ ಲಾಖಾ ಪರೀಕ್ಷೆಗಳಲ್ಲಿ ಪೂರ್ಣವಾಗಿ ಅನೇಕ ಅವಕಾಶಗಳನ್ನು ಕೊಟ್ಟರೂ ಸಹ ಉತ್ತೀರ್ಣರಾಗಿ ರುವುದಿಲ್ಲ. ಈ ನಿಟ್ಟಿನಲ್ಲಿಯು ಅವಲೋಕಿಸಿದಾಗ ಆರೋಪಿತ ನೌಕರರಿಗೆ ಶ್ರದ್ಧೆಯಿಲ್ಲದಿರುವುದು ಕಂಡು ಬರುತ್ತದೆ. ಈ ಎಲ್ಲಾ ಅಂಶಗಳನ್ನು ಮೇಲಿನ 03 ಪ್ರಕರಣಗಳಿಗೆ ಸಂಬಂಧಿಸಿದಂತೆ ವಿಚಾರಣಾ ದಾಖಲೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಸಿಬ್ಬಂದಿ.ಶಿಸ್ತು.ಅಗೈಹಾ.16/2005-06, ದಿನಾಂಕ: 24ನೇ ಮಾರ್ಚ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದಡಿಯಲ್ಲಿ ಶ್ರೀ ಗೋವಿಂದರಾಜು, ಎರಡನೇ ದರ್ಜೆ ಭೂಮಾಪಕರವರು ಈ ಹಿಂದೆ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು ರವರ ವ್ಯಾಪ್ತಿಯಲ್ಲಿ ಕರ್ತವ್ಯದಲ್ಲಿದ್ದಾಗ ಹಾಗೂ ಭೂದಾಖಲೆಗಳ ಉಪ ನಿರ್ದೇಶಕರು, ಹಾಸನ ರವರ ವ್ಯಾಪ್ತಿಯಲ್ಲಿ ಕರ್ತವ್ಯದಲ್ಲಿದ್ದಾಗ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ ಸರ್ಕಾರಿ ಕಡತಗಳನ್ನು ಅಳತೆ ಕೆಲಸ ನಿರ್ವಹಿಸದೆ, ಕಛೇರಿಗೆ ಹಿಂತಿರುಗಿಸದೆ ಬಹಳ ಕಾಲದವರೆಗೆ ಇ ಟ್ಟುಕೊಂಡಿರುವ ಬಗ್ಗೆ ವಿಚಾರಣೆ ಸಂದರ್ಭದಲ್ಲಿ ಕಂಡು ಬಂದ ಸಾಕ್ಷಿ ದಾಖಲೆ ಹಾಗೂ ಆಪಾಧಿತ ನೌಕರರೇ ಅವರ ಮೇಲೆ ಮಾಡಲಾಗಿರುವ ಆರೋಪಗಳನ್ನು ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಪ್ರಾರಂಭಿಸಿ ನಡೆಸಿದ 02 ಪ್ರಕರಣಗಳಲ್ಲಿ(ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ) ಪ್ರಥಮ ಮೌಖಿಕ ವಿಚಾರಣೆ ದಿನದಂದೇ ಆರೋಪಗಳನ್ನು ಒಪ್ಪಿರುತ್ತಾರೆ. ಮೂರನೇ ಪ್ರಕರಣದಲ್ಲಿ ಭೂದಾಖಲೆ ಗಳ ಉಪ ನಿರ್ದೇಶಕರು, ಹಾಸನ ರವರಿಗೆ ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿ ಅವರ ಮೇಲಿನ ಆರೋಪದ ಬಗ್ಗೆ ಕ್ಷಮಿಸಬೇಕೆಂದು ತಿಳಿಸಿದ್ದಾಗ್ಯೂ ನಂತರದ ಆರೋಪದ ಬಗ್ಗೆ ನಡೆದ ವಿಚಾರಣೆಯಲ್ಲಿ ಕಂಡು ಬಂದಿರುವ ಸಾಕ್ಷಿ ದಾಖಲೆಗಳಿಂದ ಆಪಾಧಿತರ ವಿರುದ್ಧ ಮಾಡಲಾಗಿರುವ ದಿನಾಂಕ: 02.12.2003 ರಿಂದ 12.04.2004 ರವರೆಗಿನ ಅನಧಿಕೃತ ಗೈರು ಹಾಜರಿಯು ಸಾಬೀತಾಗಿರುತ್ತದೆ.

ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ನಡೆಸಿದ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ 02 ಪ್ರಕರಣಗಳಲ್ಲಿ ಆಪಾಧಿತ ನೌಕರರು

| | | | |
|---|---|---|---|
| (1) | ದಿನಾಂಕ: 12.10.1998 ರಿಂದ 24.01.1999 ರವರೆಗೆ | ಒಟ್ಟು | 105 ದಿನಗಳು |
| (2) | ದಿನಾಂಕ: 01.03.1999 ರಿಂದ 27.05.1999 ರವರೆಗೆ | ಒಟ್ಟು | 88 ದಿನಗಳು |
| (3) | ದಿನಾಂಕ: 06.12.1999 ರಿಂದ 06.02.2000 ರವರೆಗೆ | ಒಟ್ಟು | 62 ದಿನಗಳು |
| (4) | ದಿನಾಂಕ: 27.03.2000 ರಿಂದ 29.10.2000 ರವರೆಗೆ | ಒಟ್ಟು | 217 ದಿನಗಳು |
| | | **ಒಟ್ಟು** | **472 ದಿನಗಳು** |

ಮೇಲ್ಕಂಡ ವಿಭಿನ್ನ ಅವಧಿಯಲ್ಲಿ ಅನಧಿಕೃತ ಗೈರು ಹಾಜರಾಗಿರುವ ಆರೋಪ, ಆರೋಪಿತರು ಒಪ್ಪಿಕೊಂಡಿರುವಂತೆ ಸಾಬೀತಾಗಿರುತ್ತದೆ. ಆಪಾಧಿತ ನೌಕರರು ದಿನಚರಿ ಹಚ್ಚಿದ ಮತ್ತು ದಿನಚರಿ ಹಚ್ಚದೇ ಯಾವುದೇ ಕೆಲಸ ನಿರ್ವಹಿಸದೇ ಸುಮಾರು 09 ತಿಂಗಳಿಂದ 02 ವರ್ಷಗಳವರೆಗೆ ಕಡತಗಳನ್ನು ಕಛೇರಿಗೆ ಹಿಂತಿರುಗಿಸದೇ ಇ ಟ್ಟುಕೊಂಡಿರುವ ಆರೋಪವನ್ನು ಸಹ ಆರೋಪಿತ ನೌಕರರು ಒಪ್ಪಿಕೊಂಡಿರುವಂತೆ ಆರೋಪ ಸಾಬೀತಾಗಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಮತ್ತೊಂದು ಪ್ರಕರಣದಲ್ಲಿ 05.02.2002 ರಿಂದ 28.03.2003 ವರೆವಿಗೆ ಅನಧಿಕೃತ ಗೈರು ಹಾಜರಾಗಿರುವುದು ಸಹ ಆರೋಪಿತರು ಒಪ್ಪಿಕೊಂಡಿರುವಂತೆ ಸಾಬೀತಾಗಿರುತ್ತದೆ. ಈ 03 ಪ್ರಕರಣಗಳಿಗೂ ಎರಡನೇ ಕಾರಣ ಕೇಳಿ ನೋಟೀಸಿನೊಂದಿಗೆ ಕಳುಹಿಸಿರುವ ವಿಚಾರಣಾ ವರದಿಯಲ್ಲಿನ ಅಂಶಗಳಿಗೆ ನೋಟೀಸುಗಳನ್ನು ಆರೋಪಿತ ನೌಕರರು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸ್ವೀಕರಿಸಿದ್ದರೂ ಯಾವುದೇ ಪ್ರತಿರಕ್ಷಣಾ ವಾದವನ್ನು ಸಲ್ಲಿಸದೆ ಇ ರುವುದು ಕಂಡು ಬಂದಿದ್ದು ಅದರಿಂದ ಆಪಾಧಿತ ನೌಕರರು ಅವರಿಗೆ ಕರ್ನಾಟಕ ಸರ್ಕಾರಿ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು-57 ರ ನಿಯಮ-11 ರಡಿಯಲ್ಲಿ ಹಾಗೂ ಸಂವಿಧಾನ ಅನುಚ್ಛೇಧ-311(2) ರಂತೆ ಒದಗಿಸಿರುವ ಸಾಮಾನ್ಯ

ಅವಕಾಶವನ್ನು ಅವರು ಉಪಯೋಗಿಸಿಕೊಂಡು ಅವರ ಮೇಲಿನ ಆರೋಪದ ಬಗ್ಗೆ ಪ್ರತಿರಕ್ಷಣಾ ವಾದವನ್ನು ಮಂಡಿಸಲು ಯಾವುದೇ ಆಸಕ್ತಿಯನ್ನು ತೋರಿಲ್ಲದೆ ಇ ರುವುದು ವಿಚಾರಣಾ ದಾಖಲೆಗಳಿಂದ ಕಂಡು ಬರುತ್ತದೆ.

ಈ ಎಲ್ಲಾ ಅಂಶದ ಅಡಿಯಲ್ಲಿ ಶ್ರೀ ಗೋವಿಂದರಾಜು, ದ್ವಿತೀಯ ದರ್ಜೆ ಭೂಮಾಪಕರವರು 1994 ರಲ್ಲಿ ಈ ಇ ಲಾಖೆಯಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿದ್ದರೂ ಅವರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಮೇಲ್ಕಂಡಂತೆ ಆಸಕ್ತಿ ತೋರದೆ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿ ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು- 1958 ರ ನಿಯಮ-106(ಎ) ಮತ್ತು 108 ಅನ್ನು ಉಲ್ಲಂಘಿ ಸಿರುವುದು ಕಂಡು ಬರುತ್ತದೆ. ಈ ಎಲ್ಲಾ ಸಂದರ್ಭವನ್ನು ಪರಿಗಣಿಸಿ ಆಪಾಧಿತ ನೌಕರರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು-1957 ರ ನಿಯಮ-8(vii) ರಲ್ಲಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಅಭಿಪ್ರಾಯ ಪಡುತ್ತೇನೆ. ಅದರಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು-1957ರ ನಿಯಮ-9(3) ಹಾಗೂ ನಿಯಮ-8(vii) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಜಿ.ವಿ.ರಾಮಚಂದ್ರ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು ಆದ ನಾನು ಶ್ರೀ ಗೋವಿಂದರಾಜು, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಕಡೂರು ಇ ವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರು,
ಪಿ.ಆರ್. 701 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 333 / 2005-06 / 84, ದಿನಾಂಕ: 29ನೇ ಮಾರ್ಚ್ 2006**

**ವಿಷಯ** : ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ., ನಾಲೂರು, ತೀರ್ಥಹಳ್ಳಿ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ** : 1) ಈ ಕಛೇರಿಯ ಆದೇಶ ನಂ. ಡಿಆರ್‌ಎಸ್ / ಸಮಾಪನೆ / ಡಿಎಲ್‌ಎಸ್ / 33 / 2004-05 ದಿನಾಂಕ: 27-10-2004.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರ ಪತ್ರ ನಂ: ಎಆರ್ 24/ ಸಮಾಪನೆ / 07 / 2005-06 ದಿನಾಂಕ: 23-12-2005.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ನಾಲೂರು, ತೀರ್ಥಹಳ್ಳಿ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ. ಸಸಂಸನಿ-24 / ನೊಂದಣಿ / 17310 / 1990-91 ದಿನಾಂಕ: 24-07-1990 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ತೀರ್ಥಹಳ್ಳಿ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 03-11-2004 ರಂದು ಪ್ರಭಾರ ವಹಿಸಿಕೊಂಡು ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಮತ್ತು ಸ್ಥಿರಾಸ್ತಿ ಏನು ಇರುವುದಿಲ್ಲವೆಂದು, ವರದಿ ಮಾಡಿರುತ್ತಾರೆ. ದಿನಾಂಕ: 12-12-2005 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಸಂಘದ ಸಮಾಪನಾಧಿಕಾರಿಯವರು ಸಭೆ ನಡೆಸಿ ನೋಂದಣಿ ರದ್ದತಿಗೆ ತೀರ್ಮಾನಿಸಿ ಸದಸ್ಯರಿಗೆ ಷೇರು ಹಣ ಪೂರ್ಣ ಹಂಚಿಕೆ ಮಾಡಿರುವುದರಿಂದ ಸದಸ್ಯತ್ವ ಶೂನ್ಯಗೊಂಡಿರುತ್ತದೆ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಆಸ್ತಿ ಜವಾಬ್ದಾರಿ ಶೂನ್ಯಗೊಂಡಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 2000 / ದಿನಾಂಕ: 21-11-2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ. ನಾಲೂರು, ತೀರ್ಥಹಳ್ಳಿ ತಾ: ಇದರ ನೋಂದಣಿ ಸಂ. ಸಸಂಸನಿ-24 / ನೊಂದಣಿ / 17310 / 1990-91 ದಿನಾಂಕ: 24-07-1990 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು. ಸಮಾಪನಾಧಿಕಾರಿರವರ ಪ್ರಭಾರ ಭತ್ಯೆ ಹಾಗೂ ವೆಚ್ಚಗಳನ್ನು ಅನುಮೋದಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 29-03-2006 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 778

## HIGH COURT OF KARNATAKA
## NOTIFICATION
### No. HCE.715/2005, DATED: 8TH DECEMBER 2005

In exercise of the powers conferred under section 4(b) of the Right to Information Act, 2005 (Central Act No.22 of 2005), the detailed information relating to the High Court of Karnataka is published as hereunder, for the information of general public:

| | | |
|---|---|---|
| (i) | the particulars of its Organisation, functions and duties | ***Organisation*** : High Court of Karnataka<br>***Functions & Duties*** : Administration of Justice, Sub-ordinate Courts Administration and other Administrations |
| (ii) | the powers and duties of its officers and employees | Details are as at Annexure - I |
| (iii) | the procedure followed in the decision making process, including channels of supervision and accountability | Caseworker will open a file on receipt of proposal or process the proposal in the existing file. The Section Officer will scrutinise the proposal and place it before the Assistant Registrar. Assistant Registrar / Deputy Registrar will review the proposal in light of the existing proviso of Rules, submit to the Registrars. The Registrars will decide the course of action to be taken on a proposal under the delegated powers and if necessary will submit the file to Hon'ble Judges or Hon'ble Chief Justice for final orders. |
| (iv) | the norms set by it for the discharge of its functions | Depending on urgency proposal will be finalised on priority |
| (v) | the rules, regulations, instructions, manuals and records, held by it or under its control or used by its employees for discharging its functions | Details are as at Annexure - II |
| (vi) | a statement of the categories of documents that are held by it or under its control | Case files and relevant Registers |
| (vii) | the particulars of any arrangement that exists for consultation with, or representation by, the members of the public in relation to the formulation of its policy or implementation thereof | Public Relation Officer will give information |
| (viii) | a statement of the boards, councils, committees and other bodies consisting of two or more persons constituted as its part or for the purpose of its advice and as to whether meetings of those boards, councils, committees and other bodies are open to the public, or the minutes of such meetings are accessible for public | No such statutory Committee<br><br>No question of giving information to the public |

| | | |
|---|---|---|
| (ix) | a directory of its officers and employees | Directory of officers and employees is in the High Court establishment. In view of the frequent changes of residential address of employees, the High Court Establishment be requested to note the changes. |
| (x) | the monthly remuneration received by each of its officers and employees, including the system of compensation as provided in its regulations | There will be change in monthly pay of one or other officials/officers every month in view of Annual increment. Every month the Section Officer, Accounts Branch will generate payslips of all employees which contain gross pay, deductions and net pay etc., and form a book or a register kept in Accounts Branch-I |
| (xi) | the budget allocated to each of its agency, indicating the particulars of all plans, proposed expenditures and reports on disbursements made | Allotment of the budget to the High Court is under non-plan scheme |
| (xii) | the manner of execution of subsidy programmes, including the amounts allocated and the details of beneficiaries of such programmes | No such programmes |
| (xiii) | particulars of recipients of concessions, permits or authorizations granted by it | No such programmes |
| (xiv) | details in respect of the information, available to or held by it, reduced in an electronic form | 1. Detailed history of cases filed from the date of its filing till its disposal will process through computers<br>2. Pay particulars of all the employee of the High Court<br>3. Issue of certified copies by scanning and storing in the Judgement through high powered scanner |
| (xv) | the particulars of facilities available to citizens for obtaining information, including the working hours of a library or reading room, if maintained for public use | Library is accessible only to the Hon'ble Judges and Advocates<br><br>Timings:- 8.00 a.m. to 8.00 p.m. |
| (xvi) | the names, designations and other particulars of the Public Information Officers | ***H.M.Mulagund***, Deputy Registrar, State Public Information Officer, High Court of Karnataka, Bangalore<br>Office : 22869542 Ext. 342<br>Resi : 22954265 |
| (xvii) | such other information as may be prescribed | Nil |

BY ORDER OF THE HON'BLE CHIEF JUSTICE,
**N. ANANDA**
REGISTRAR GENERAL

**ANNEXURE – I**

The powers and duties of the Officers and employees of the High Court of Karnataka

| | |
|---|---|
| **Peons** | To keep the office neat and tidy |
| **Attenders** | To deliver the files/ tappals to other sections |
| **Typist** | In charge of the typing work in the Section |
| **Second Division Assistant** | In charge of the work of diarising and organizing, movements, distribution of receipts/ files in the Section |
| **Case Workers (Senior Assistant / First Division Assistant)** | To attend to the job of case working as per the duties cast on them |

| | |
|---|---|
| **Stenographer / Judgement Writers / Sr. Judgement Writers /** | In charge of receipt of tappals/files by the Hon'ble Judges / Section Officer, Typing and Stenography work entrusted by the Hon'ble Judges |
| **Court Officers/ Asst. Court Officers** | To arrange the case files according to cause list, to note the stage of the case according to court proceedings and to keep all the Law books that are received for the conduct of the proceedings |
| **Section Officer** | In charge of the whole Section<br>Scrutiny of files submitted by the case worker as per the procedure prescribed. |
| **Assistant Registrar** | Branch Officer in charge of the one or more Sections<br>Scrutiny of files submitted by the Section Officer signing of letters on behalf of the High Court |
| **Deputy Registrar** | In charge of the 5 – 6 Section. Report to the Registrars on important matters. |
| **Registrars** | Heads of the organization Acts, in their capacity as Head of the Departments upon the advice/directions of the Hon'ble Chief Justice and Hon'ble Judges. |

**ANNEXURE – II**

**(v) The rules, regulations, instructions, manuals and records, held by it or under its control or used by its employees for discharging its functions:**

**(a) Acts:**

1. High Court Rules and Manual
2. The Karnataka Civil Services (Regulation of Promotion, Pay and Pension) Act 1993 Rules.
3. The Karnataka State Services (Determination of Age) Act, 1974.

**(b) Rules:**

1. Karnataka High Court General Recruitment Rules 1973.
2. Karnataka High Court General Recruitment Rules 1984.
3. Karnataka High Court General Recruitment Rules 1985.
4. The Karnataka Civil Services Rules.
5. K.C.S (CC & A Rules 1957).
6. The Karnataka Civil Services (Probation) Rules, 1977.
7. The Karnataka Civil Services (Conduct Rules) Rules 1966.
8. The Karnataka Civil Services (Regulation of Promotion, Pay & Pension) Rules 1978.
9. The Karnataka Civil Services (Medical Attendance) Rules 1963.
10. The Karnataka Civil Services (Performance Reports) Rules, 1994.

**(c) Instructions, Manuals and others**

1. The Karnataka Financial Code.
2. The Karnataka Treasury Code
3. The Manual of Contingent Expenditure.
4. The Departmental Promotion Committees.
5. The Criminal Procedure Code.
6. The Civil Procedure Code.
7. Reservation for Ex-servicemen.
8. Reservation roster for Scheduled Castes, Scheduled Tribes and other Backward Classes.

**(VI) A statement of the categories of documents that are held by it or under its control:**

Following documents of Group-B Officers and Group-C & D Officials:

1. Service Registers.
2. Annual Performance Reports
3. Assets & Liabilities statements

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ : ಎಫ್.ಸಿ–04/2006.**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1) ವಸಂತ ಕೋಂ ಪಳನಿ, 36 ವರ್ಷ
2) ಮಹಾಲಕ್ಷ್ಮಿ ತಂದೆ : ಪಳನಿ 20 ವರ್ಷ
3) ಲತಾ, ತಂದೆ : ಪಳನಿ 15 ವರ್ಷ
4) ವಲ್ಲಿ, ತಂದೆ : ಪಳನಿ, 15 ವರ್ಷ
5) ರವಿಕುಮಾರ್ ಬಿನ್ ಪಳನಿ, 3 ವರ್ಷ
6) ಲಕ್ಷ್ಮಿಕಾಂತ ಬಿನ್ ಪಳನಿ, 10 ವರ್ಷ
ಮಳ್ಯರ್‌ಕೀಲ್, ತೇರು ಮುಸ್ಕಾಂ,
ಬಿ ಕ್ಲಾಕ್, ಅಂಡರ್‌ಸನ್‌ಪೇಟೆ,
ಕೆ.ಜಿ.ಎಫ್.

ವ್ಯವಸ್ಥಾಪಕ ನಿರ್ದೇಶಕರು,
ಭಾರತ್ ಚಿನ್ನದ ಗಣಿ ನಿಯಮಿತ,
ಊರಗಂ ಅಂಚೆ, ಕೆ.ಜಿ.ಎಫ್.

**ಅಧಿಸೂಚನೆ**

ಅರ್ಜಿದಾರರಾದ ವಸಂತ ಕೋಂ ಲೇಟ್ ಪಳನಿ ಅವರು ತಮ್ಮ ಪತಿ ಪಳನಿ ಅವರು ಪ್ರತಿವಾದಿಯವರ ಗಣಿಯಲ್ಲಿ ಕಾರ್ಮಿಕರಾಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 05.01.1995 ರಂದು ಸಂಭವಿಸಿದ ಅಪಘಾತದಿಂದ ತೀವ್ರ ಸ್ವರೂಪದ ಗಾಯಗಳು ಉಂಟಾಗಿ ಸದರಿ ಗಾಯಗಳ ದೆಸೆಯಿಂದ ಚಿಕಿತ್ಸೆ ಫಲಕಾರಿಯಾಗದೆ ದಿನಾಂಕ: 11.01.1995 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.04.2006 ರಂದು ನೀಡಲಾಗಿದೆ.

**ಎನ್.ಬಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 821

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ : ಎಫ್.ಸಿ–05/2006.**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

1) ಶ್ರೀಮತಿ ಸುಶೀಲಮ್ಮ 20 ವರ್ಷ
ಕೋಂ ಲೇಟ್ ವೆಂಕಟೇಶ್
2) ಕು: ವರ್ಷ, 02 ವರ್ಷ
ತಂದೆ : ಲೇಟ್ ವೆಂಕಟೇಶ್
3) ವೆಂಕಟಸ್ವಾಮೀ, 60 ವರ್ಷ
ಬಿನ್ ಲೇಟ್ ರಂಗಪ್ಪ,
ಗುಂಡ್ಲಪಲ್ಲಿ ವಿಲೇಜ್,
ಚಂಚುರಾಯನಪಲ್ಲಿ ಅಂಚೆ,
ತಿಮ್ಮಂಪಲ್ಲಿ ಮಂಡಲಂ,
ಗೊಳ್ಳುರು ಹೋಬಳಿ,
ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ.

1) ಶಿವರಾಮ ರೆಡ್ಡಿ ಬಿನ್ ವೆಂಕಟನಾರಪ್ಪ
ಹೊಸ ಉದಯ ವಿಲೇಜ್,
ಬಾಗೇಪಲ್ಲಿ ತಾಲ್ಲೂಕು,
ಕೋಲಾರ ಜಿಲ್ಲೆ.
2) ರಾಯಲ್ ಸುಂದರಂ ಅಲಿಯನ್ಸ್
ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್
2ನೇ ಮಹಡಿ, ನಂ. 142,
ಬ್ರಿಗೇಡ್ ರಸ್ತೆ,
ಬೆಂಗಳೂರು – 560 025.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸುಶೀಲಮ್ಮ ಕೋಂ ಲೇಟ್ ವೆಂಕಟೇಶ್ ಅವರು ತಮ್ಮ ಪತಿ ವೆಂಕಟೇಶ್ ಅವರು 1ನೇ ಪ್ರತಿವಾದಿಯಾದ ಶ್ರೀ ಶಿವರಾಮ ರೆಡ್ಡಿ ರವರ ಟ್ರಾಕ್ಟರ್ ಟ್ರೈಲರ್‌ನಲ್ಲಿ ಲೋಡರ್ ಅನ್‌ಲೋಡರ್

ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 30.07.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.04.2006 ರಂದು ನೀಡಲಾಗಿದೆ.

**ಎನ್.ಬಿ. ರಾಮಚಂದ್ರ**

ಪಿ.ಆರ್. 822

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ : ಎಫ್.ಸಿ–06/2006.**

**ಅರ್ಜಿದಾರರು :**

1) ಶ್ರೀಮತಿ ಮುಬಾರಕ್, 26 ವರ್ಷ
ಕೋಂ ಲೇಟ್ ಅಬ್ದುಲ್ ವಜೀದ್
2) ಮಾ: ಮುಜಾಹಿದ್ ಪಾಷ 10 ವರ್ಷ
ಬಿನ್ ಲೇಟ್ ಅಬ್ದುಲ್ ವಜೀದ್
3) ಕು: ರುಬೀನ್, 09 ವರ್ಷ
ತಂದೆ: ಲೇಟ್ ಅಬ್ದುಲ್ ವಜೀದ್
4) ಕು: ಕೌಸರ್, 08 ವರ್ಷ,
ತಂದೆ: ಲೇಟ್ ಅಬ್ದುಲ್ ವಜೀದ್,
ಅಕ್ಬರ್ ರಸ್ತೆ, ಶ್ರೀನಿವಾಸಪುರ.

**ವಿರುದ್ಧ**

**ಪ್ರತಿವಾದಿಗಳು :**

1) ಎ. ನಜೀರ್ ಅಹ್ಮದ್
ಬಿನ್ ಟಿ. ಅಬ್ದುಲ್ ಅಜೀಜ್,
ಆಜಾದ್ ರಸ್ತೆ, ಶ್ರೀನಿವಾಸಪುರ ಟೌನ್,
ಕೋಲಾರ ಜಿಲ್ಲೆ.
2) ಯುನೈಟೆಡ್ ಇಂಡಿಯಾ
ಇನ್‌ಷೂರೆನ್ಸ್ ಕಂ. ಲಿ.,
ಅಂಚೆ ಪೆಟ್ಟಿಗೆ ನಂ. 16, 1ನೇ ಮಹಡಿ,
ಎಸ್.ಬಿ.ಎಲ್.ಟಿ. ಬಿಲ್ಡಿಂಗ್,
ಪಾಲಿಟೆಕ್ನಿಕ್ ರಸ್ತೆ, ಚಿಂತಾಮಣಿ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಮುಬಾರಕ್ ಕೋಂ ಲೇಟ್ ಅಬ್ದುಲ್ ವಜೀದ್ ಅವರು ತಮ್ಮ ಪತಿ ಅಬ್ದುಲ್ ವಜೀದ್ ಅವರು 1ನೇ ಪ್ರತಿವಾದಿಯಾದ ಶ್ರೀ ನಜೀರ್ ಅಹ್ಮದ್ ರವರ ಲಾರಿಯಲ್ಲಿ ಕ್ಲೀನರ್ ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 31.12.2005 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.04.2006 ರಂದು ನೀಡಲಾಗಿದೆ.

**ಎನ್.ಬಿ. ರಾಮಚಂದ್ರ**

ಪಿ.ಆರ್. 823

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ : ಎಫ್.ಸಿ–07/2006.**

**ಅರ್ಜಿದಾರರು :**
1) ಶ್ರೀಮತಿ ಯಾಸೀನ್ ತಾಜ್, 25 ವರ್ಷ
ಕೋಂ ಲೇಟ್ ಯಾಸೀನ್ ಪಾಶ
2) ಕು: ಜೋಯಿಯ ಅಂಜುಂ, 8 ವರ್ಷ
ತಂದೆ: ಲೇಟ್ ಯಾಸೀನ್ ಪಾಶ
3) ಕು: ಅಲಿಯಾ ಅಂಜುಂ, 07 ವರ್ಷ
ತಂದೆ: ಲೇಟ್ ಯಾಸೀನ್ ಪಾಶ
4) ಮಾ: ಅಬ್ಬರ್ ಪಾಶ, 06 ತಿಂಗಳು
ಬಿನ್ ಲೇಟ್ ಯಾಸೀನ್ ಪಾಶ
5) ಶ್ರೀಮತಿ ಜೈಬುನ್ನೇಸ್ಸಾ, 60 ವರ್ಷ
ಕೋಂ ಬಾಷ್ ಸಾಬ್
6) ಶ್ರೀ ಬಾಷ್ ಸಾಬ್, 65 ವರ್ಷ
ಬಿನ್ ಲೇಟ್ ಕರೀಂ ಸಾಬ್, ಮಿಲತ್
ನಗರ, ಸಿ.ಬಿ. ರಸ್ತೆ, ಕೋಲಾರ.

**ವಿರುದ್ಧ**

**ಪ್ರತಿವಾದಿಗಳು :**
1) ಶ್ರೀ ಮೊಹಮ್ಮದ್ ಕುನ್ನೀರುದ್ದೀನ್
ಹೆಚ್.ಎಂ.ಎಸ್. ರೋಡ್ ಲೈನ್ಸ್,
ಬಿ.ಎಂ. ರಸ್ತೆ, ರಾಬರ್ಟ್‌ಸನ್‌ಪೇಟೆ,
ಕೆ.ಜಿ.ಎಫ್., ಕೋಲಾರ ಜಿಲ್ಲೆ.
2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್
ಕಂಪನಿ ಲಿಮಿಟೆಡ್,
ಶಾಖಾ ಕಛೇರಿ,
ದೊಡ್ಡಪೇಟೆ,
ಕೆ.ಜಿ.ಎಫ್.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಯಾಸೀನ್ ತಾಜ್ ಕೋಂ ಲೇಟ್ ಯಾಸೀನ್ ಪಾಶ ಅವರು ತಮ್ಮ ಪತಿ ಯಾಸೀನ್ ಪಾಶ ಅವರು 1ನೇ ಪ್ರತಿವಾದಿಯಾದ ಶ್ರೀ ಮೊಹಮ್ಮದ್ ಕುನ್ನೀರುದ್ದೀನ್ ರವರ ಬಸ್ಸಿನಲ್ಲಿ ಚಾಲಕನಾಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 12.12.2005 ರಂದು ಸಂಭವಿಸಿದ ಅಪಘಾತದಿಂದ ತೀವ್ರವಾಗಿ ಗಾಯಗೊಂಡು ಸದರಿ ಗಾಯಗಳ ದೆಸೆಯಿಂದ ದಿನಾಂಕ: 16.12.2005 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.04.2006 ರಂದು ನೀಡಲಾಗಿದೆ.

**ಎನ್.ಬಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 824

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ : ಎಫ್.ಸಿ–08/2006.**

**ಅರ್ಜಿದಾರರು :**
1) ಶ್ರೀಮತಿ ಮುನಿವೆಂಕಟಮ್ಮ, 45 ವರ್ಷ
2) ಶ್ರೀ ರಾಮಚಂದ್ರಪ್ಪ, 50 ವರ್ಷ
ಬಿನ್ ಲೇಟ್ ಹನುಮಂತಪ್ಪ
ಮಲ್ಲಪನಹಳ್ಳಿ ವಿಲೇಜ್,
ದೇವರಾಯಸಮುದ್ರ ಅಂಚೆ,
ಮುಳಬಾಗಲ್ ತಾಲ್ಲೂಕು,
ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**
1) ಶ್ರೀ ಎ. ನಾರಾಯಣಪ್ಪ ಬಿನ್ ಆಂಜಪ್ಪ,
ಬೆಟ್ಟಗಾರಹಳ್ಳಿ ವಿಲೇಜ್,
ಹನುಮನಹಳ್ಳಿ ಅಂಚೆ,
ಮುಳಬಾಗಲ್ ತಾಲ್ಲೂಕು,
ಕೋಲಾರ ಜಿಲ್ಲೆ.
2) ದಿ ಓರಿಯಂಟಲ್ ಇನ್‌ಷೂರೆನ್ಸ್
ಕಂಪನಿ ಲಿಮಿಟೆಡ್, ನಂ. 1,
ಅಂಡ್ 11 ಮಹಡಿ, ಹೊಸೂರು ರಸ್ತೆ,
9ನೇ ಕ್ರಾಸ್ ಎದುರು,
ವಿಲ್ಸನ ಗಾರ್ಡನ್, ಬೆಂಗಳೂರು–27.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಮುನಿವೆಂಕಟಮ್ಮ ಅವರು ತಮ್ಮ ಮಗ ಪ್ರಭಾಕರ್ ಅವರು 1ನೇ ಪ್ರತಿವಾದಿಯಾದ ಶ್ರೀ ಎ. ನಾರಾಯಣಪ್ಪ ರವರ ಲಾರಿಯಲ್ಲಿ ಚಾಲಕನಾಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ:

12.12.2005 ರಂದು ಸಂಭವಿಸಿದ ಅಪಘಾತದಿಂದ ತೀವ್ರವಾಗಿ ಗಾಯಗೊಂಡು ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.04.2006 ರಂದು ನೀಡಲಾಗಿದೆ.

**ಎನ್.ಬಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 825

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ : ಎಫ್.ಸಿ–09/2006.**

**ಅರ್ಜಿದಾರರು :**

1) ಶ್ರೀಮತಿ ಶಾರದಮ್ಮ, 48 ವರ್ಷ
ಕೋಂ ಲೇಟ್ ವೆಂಕಟಾಚಾರಿ
2) ಸುಬ್ರಮಣ್ಯಚಾರಿ, 19 ವರ್ಷ
ಬಿನ್ ಲೇಟ್ ವೆಂಕಟಾಚಾರಿ
ಎ ಬ್ಲಾಕ್, ನರಸಾಪುರ ರಸ್ತೆ,
ವೇಮಗಲ್ ವಿಲೇಜ್,
ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**

1) ವೆಂಕಟೇಶ್ ಬಿನ್ ಸುಂಕಯ್ಯ
ವೇಮಗಲ್ ವಿಲೇಜ್ ಮತ್ತು ಅಂಚೆ
ಕೋಲಾರ ತಾಲ್ಲೂಕು.
2) ದಿ ಶಾಖಾ ವ್ಯವಸ್ಥಾಪಕರು
ಮೆ: ನ್ಯೂ ಇಂಡಿಯಾ ಆಶ್ಯೂರೆನ್ಸ್
ಕಂಪನಿ ಲಿಮಿಟೆಡ್,
ಶಾಖಾ ಕಛೇರಿ, ಬಾಗಲೂರು
ಮ್ಯಾನ್ಷನ್, ದೊಡ್ಡಪೇಟೆ
ಕೋಲಾರ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಶಾರದಮ್ಮ ಕೋಂ ಲೇಟ್ ವೆಂಕಟಾಚಾರಿ ಅವರು ತಮ್ಮ ಮಗಳು ಈಶ್ವರಮ್ಮ ರವರು 1ನೇ ಪ್ರತಿವಾದಿಯಾದ ಶ್ರೀ ವೆಂಕಟೇಶ್ ಬಿನ್ ಸುಂಕಯ್ಯ ರವರ ಟೆಂಪೋದಲ್ಲಿ ಲೋಡರ್ ಅನ್‌ಲೋಡರ್ ಆಗಿದ್ದು, ಕರ್ತವ್ಯ ನಿರತರಾಗಿದ್ದಾಗ ದಿನಾಂಕ: 23.07.2005 ರಂದು ಸಂಭವಿಸಿದ ಅಪಘಾತದಿಂದ ತೀವ್ರವಾಗಿ ಗಾಯಗೊಂಡು ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತಳ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ / ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 05.04.2006 ರಂದು ನೀಡಲಾಗಿದೆ.

**ಎನ್.ಬಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು.
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್. 826

**CONSULTANCY SERVICES FOR THE PROPOSED CONSTRUCTION OF MULTI-STOREYED PARKING NEAR VIDHANA SOUDHA AND VIKASA SOUDHA, BANGALORE**

**EXPRESSION OF INTEREST**

**NOT.No.EE/ BLD-1/ TS-1/ VSSB/ MSP/ 36/ 2006-07, Dated: 22nd May, 2006**

Applications are invited for the consultancy services to be provided for the proposed construction of multi storeyed parking near Vidhana Soudha and Vikasa Soudha. The Applicant should have expertise in building construction and Traffic management. The applicants have to furnish their capability statement along with details of works executed within 30 days along with the detail Scheme for the proposed Multi-storeyed parking. The scope of work is to give report on Techno-economic feasibility of the project. The consultant shall work in Co-Ordination with Public Works, Police and Department of Personal and Administrative reforms while studying the proposal. The proposed Multi-storeyed parking building should merge with the overall land scape of the area and requires a through examination to study the techno-economic feasibility of the project. The structure shall be under ground having proper approaches and exists.

The details of the entire scheme along with the charges towards the consultancy shall be submitted in sealed covers addressed to the Executive Engineer, No.1 Buildings Division, SJP Campus, KPWD, Bangalore-1 on **or before 22.06.2006.**

The KPWD reserves the right to accept or reject any/ all applications/ schemes without assigning any reasons. After through examination of the schemes, the most suitable and techno-economic feasible one shall be considered.

Executive Engineer,
No.1 Buildings Division, Bangalore.

PR-923

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕಟಣೆ**

**ನಂ.ಜಿಪಂಶಿ: ಜಿಸಕಅ:ವಿ7: ಸಿಆರ್02: 2006-07, ದಿನಾಂಕ:24ನೇ ಮೇ, 2006**

**ವಿಷಯ:** 2006-07ನೇ ಸಾಲಿಗೆ ಪರಿಶಿಷ್ಟ ಜಾತಿ/ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ: ಎಸ್‌ಡಬ್ಲ್ಯೂಎಎಲ್ 68: ಎಸ್‌ಇಡಬ್ಲ್ಯೂ 89: ದಿನಾಂಕ: 02.11.1990.

2006-07ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ನಾಲ್ಕು ವರ್ಷಗಳ ತರಬೇತಿಗಾಗಿ ಶಿವಮೊಗ್ಗ ಜಿಲ್ಲೆಯ ಪರಿಶಿಷ್ಟ ಜಾತಿ: ವರ್ಗಗಳ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕ್ರಿಯಾ ಯೋಜನೆಯಲ್ಲಿ ಗುರಿ ನಿಗದಿಪಡಿಸಲಾಗಿದೆ. ಆದ್ದರಿಂದ ಪರಿಶಿಷ್ಟ ಜಾತಿ: ವರ್ಗಗಳ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿತ ಅರ್ಜಿ ನಮೂನೆಗಳನ್ನು **ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಗಾಂಧಿನಗರ ಮುಖ್ಯರಸ್ತೆ, ಶಿವಮೊಗ್ಗ** ಇಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು. ಭರ್ತಿ ಮಾಡಿ ಅಗತ್ಯ ದಾಖಲಾತಿಗಳೊಂದಿಗೆ ದಿನಾಂಕ: **24.06.2006ರ** ಒಳಗೆ ಸಲ್ಲಿಸಬೇಕು. ಕೊನೆಯ ದಿನಾಂಕ: ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಬಂಧನೆಗಳು:**

1. ಅಭ್ಯರ್ಥಿಗಳು ಶಿವಮೊಗ್ಗ ಜಿಲ್ಲೆಯವರಾಗಿದ್ದು ಪರಿಶಿಷ್ಟ ಜಾತಿ: ವರ್ಗಕ್ಕೆ ಸೇರಿದವರಾಗಿರಬೇಕು.
2. ಕಾನೂನು ಪದವಿಯಲ್ಲಿ ತೇರ್ಗಡೆ ಹೊಂದಿ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳು ಮೀರಿರಬಾರದು.
3. ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 18 ರಿಂದ 35 ವರ್ಷದ ಮಿತಿಯೊಳಗಿರಬೇಕು.
4. ತರಬೇತಿಯನ್ನು ಶಿವಮೊಗ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.
5. ಜಿಲ್ಲಾಮಟ್ಟದ ಆಯ್ಕೆ ಸಮಿತಿಯ ಮೂಲಕ ಸಂದರ್ಶನಕ್ಕೆ ಕರೆದು ಅಭ್ಯರ್ಥಿಗಳನ್ನು ತರಬೇತಿಗಾಗಿ ಆಯ್ಕೆ ಮಾಡಲಾಗುವುದು.
6. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲಕ್ಕೆ ಕಡಿಮೆ ಇಲ್ಲದಂತೆ ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯವಾದಿಗಳ ಬಳಿ ತರಬೇತಿ ಪಡೆಯಬೇಕು.
7. ಈ ತರಬೇತಿಯ ಅವಧಿಯಲ್ಲಿ ಹಾಜರಾಗಿ ಹಾಗೂ ದಿನಚರಿಗಳನ್ನು ಪಡೆದು ಅದನ್ನು ಪರಿಶೀಲಿಸಿ, ಪ್ರತಿ ಮಾಹೆ ರೂ.1000/- (ಒಂದು ಸಾವಿರ) ಗಳ ದರದಲ್ಲಿ ಮಾತ್ರ ತರಬೇತಿ ಭತ್ಯೆಯನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.
8. ಈ ತರಬೇತಿಗಾಗಿ ಅರ್ಜಿ ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಕೊನೆಯ ದಿನಾಂಕದ ಒಳಗೆ ಭರ್ತಿ ಮಾಡಿದ ಅರ್ಜಿಯೊಂದಿಗೆ ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ಎಲ್ಲಾ ಪರೀಕ್ಷೆಗಳ ಅಂಕ ಪಟ್ಟಿಗಳು, ಜಾತಿ ದೃಢೀಕರಣ ಪತ್ರಗಳನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಲು ಬೇಕಾಗುವ ಬಾರ್ ಕೌನ್ಸಿಲ್‌ನ ನೊಂದಣಿ ಪ್ರಮಾಣ ಪತ್ರದ ಪ್ರತಿಯೊಂದಿಗೆ ಪ್ರತಿಯಲ್ಲಿ ಅರ್ಜಿ ಸಲ್ಲಿಸಬೇಕು.
9. ಅಭ್ಯರ್ಥಿಯು ಯಾವುದೇ ಸರ್ಕಾರಿ, ಅರೆ ಸರ್ಕಾರಿ ನೌಕರಿಯಲ್ಲಿರಬಾರದು, ವಿದ್ಯಾಭ್ಯಾಸ ಮಾಡುತ್ತಿರಬಾರದು.
10. ಆಯ್ಕೆ ಅಭ್ಯರ್ಥಿಯು ಸುಳ್ಳು ದಾಖಲಾತಿ ನೀಡಿ ಆಯ್ಕೆಯಾಗಿದ್ದು ಕಂಡುಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು, ಮತ್ತು ಈ ಸಂಬಂಧವಾಗಿ ಪಡೆದ ಶಿಷ್ಯವೇತನವನ್ನು ಬಡ್ಡಿ ಸಮೇತ ಹಿಂದಿರುಗಿಸಬೇಕಾಗುವುದು.

11. ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ದನಾಗಿರುವ ಬಗ್ಗೆ, ತರಬೇತಿ ಅವಧಿಯ ನಾಲ್ಕು ವರ್ಷವಿದ್ದು, ತರಬೇತಿಯನ್ನು ಮಧ್ಯದಲ್ಲಿ ಬಿಡದಿರುವ ಬಗ್ಗೆ, ಒಂದು ಮುಚ್ಚಳಿಕೆ ಪತ್ರವನ್ನು ರೂ.20/- ಬೆಲೆಯ ಛಾಪಾ ಕಾಗದದಲ್ಲಿ ಬರೆದುಕೊಡಬೇಕು. ಒಂದು ವೇಳೆ ತರಬೇತಿ ಮಧ್ಯದಲ್ಲಿ ಬಿಟ್ಟರೆ ಅದುವರೆವಿಗೂ ಪಡೆದಿರುವ ಶಿಷ್ಯವೇತನವನ್ನು ವಾರ್ಷಿಕ ಶೇ.10ರ ಬಡ್ಡಿ ದರದಲ್ಲಿ ಸರ್ಕಾರಕ್ಕೆ ಮರುಪಾವತಿಸಲು ಬದ್ದರಾಗಿರಬೇಕು. ಇಲ್ಲವಾದಲ್ಲಿ ಭೂಕಂದಾಯ ಬಾಕಿ ಕಾಯ್ದೆಯಂತೆ ವಸೂಲಿ ಮಾಡಲಾಗುವುದು.
12. ಆಯ್ಕೆಯಾದ ಅಭ್ಯರ್ಥಿಯು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
13. ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಮತ್ತು ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಪಿ.ಆರ್.924 ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಶಿವಮೊಗ್ಗ ಜಿಲ್ಲೆ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಕಾರ್ಯನಿರ್ವಾಹಕ ಇಂಜಿನಿಯರ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಾಗಲಕೋಟೆ

## ಪ್ರಕಟಣೆ

### ಸಂಖ್ಯೆ: ಕಾನಿಇಂ/ ಬೃಕಾವಿ/ ಬಾಕೋ/ ಕ.ಸಂ.199/ 760-62, ದಿನಾಂಕ:23ನೇ ಮೇ, 2006

1948ರ ಅಧಿನಿಯಮ ಭಾರತ ವಿದ್ಯುಚ್ಛಕ್ತಿ 29(1) ಅಡಿಯಲ್ಲಿ ಮಂಜೂರಾತಿಯಾದ ಯೋಜನೆಯನ್ನು ಈ ಮೂಲಕ ಪ್ರಕಟಿಸಲಾಗಿದೆ.

1948ರ ವಿದ್ಯುತ್ ಸರಬರಾಜು ಕಾಯಿದೆ ಅನುಬಂಧ 28ರ ಅಡಿಯಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಯೋಜನೆಗಳನ್ನು ರೂಪಸಿದ್ದು ಕಾಯಿದೆ ಅನುಬಂಧ 29(1) ಅಡಿಯಲ್ಲಿ ಪರವಾನಿಗೆ ಹೊಂದಿದ ಹಾಗೂ ಆಸಕ್ತ ವ್ಯಕ್ತಿಗ್ಳ ಮಾಹಿತಿಗಾಗಿ ಯೋಜನೆಯ ವಿವರಗಳು ಈ ಕೆಳಗಿನಂತಿವೆ.

**1. ಯೋಜನೆಯ ಹೆಸರು:** ಮುಧೋಳ ತಾಲ್ಲೂಕಿನ **ಶಿರೋಳ** ಗ್ರಾಮದಲ್ಲಿ 2x10 ಎಂ.ವ್ಹಿ.ಎ., 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಾಣ (33 ಕೆ.ವ್ಹಿ. ಕೇಂದ್ರವನ್ನು 110 ಕೆ.ವ್ಹಿ.ಗೆ ಮೇಲ್ದರ್ಜಿಸುವುದು) ಹಾಗೂ ಪ್ರಸ್ತುತ 110 ಕೆ.ವ್ಹಿ. ಜಮಖಂಡಿ- ಪ್ರಭುಲಿಂಗೇಶ್ವರ ಶುಗರ್ ಫ್ಯಾಕ್ಟರಿ ಮಾರ್ಗವನ್ನು ಟ್ಯಾಪ್ ಮಾಡಿ ಸಿಂಗಲ್ ಸರ್ಕ್ಯುಟ್ ಮಾರ್ಗವನ್ನು ಡಬಲ್ ಸರ್ಕ್ಯುಟ್ ಟಾವರಗಳ ಮೇಲೆ ನಿರ್ಮಾಣ ಮಾಡಿ ಪ್ರಸ್ತಾವಿತ 110 ಕೆ.ವ್ಹಿ. ಶಿರೋಳ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು. (ಮಾರ್ಗದ ಉದ್ದ 7.203 ಕಿ.ಮೀ.)

**ಪ್ರಮುಖ ಲಕ್ಷಣಗಳು:** ಶಿರೋಳ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು **ಸಿದ್ದಾಪುರ, ಪ್ರಭುಲಿಂಗೇಶ್ವರ ಶುಗರ್ ಫ್ಯಾಕ್ಟರಿ, ಹುಲ್ಯಾಳ, ಕುಲಾಲಿ ಮತ್ತು ಶಿರೋಳ** ಮಾರ್ಗವಾಗಿ ಪ್ರಸ್ತಾವಿತ 110/ 11ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ **ರೂ.593.71 ಲಕ್ಷ** ರೂಪಾಯಿಗಳು.

**2. ಯೋಜನೆಯ ಹೆಸರು:** ಜಮಖಂಡಿ ತಾಲ್ಲೂಕಿನ **ಬನಹಟ್ಟಿ** ಗ್ರಾಮದಲ್ಲಿ 2x10 ಎಂ.ವ್ಹಿ.ಎ., 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಾಣ ಹಾಗೂ ಪ್ರಸ್ತುತ 110 ಕೆ.ವ್ಹಿ. ಜಮಖಂಡಿ- ಮಹಾಲಿಂಗಪುರ ಮಾರ್ಗವನ್ನು ಟ್ಯಾಪ್ ಮಾಡಿ ಸಿಂಗಲ್ ಸರ್ಕ್ಯುಟ್ ಮಾರ್ಗವನ್ನು ಡಬಲ್ ಸರ್ಕ್ಯುಟ್ ಟಾವರಗಳ ಮೇಲೆ ನಿರ್ಮಾಣ ಮಾಡಿ ಪ್ರಸ್ತಾವಿತ 110 ಕೆ.ವ್ಹಿ. ಬನಹಟ್ಟಿ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು. (ಮಾರ್ಗದ ಉದ್ದ 5.762 ಕಿ.ಮೀ.)

**ಪ್ರಮುಖ ಲಕ್ಷಣಗಳು:** ಬನಹಟ್ಟಿ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು **ಚಿಮ್ಮಡ, ಹೊಸೂರ, ಜಗದಾಳ, ರಾಮಪೂರ, ಬನಹಟ್ಟಿ, ಯೆಳ್ಳಟ್ಟಿ** ಮಾರ್ಗವಾಗಿ ಪ್ರಸ್ತಾವಿತ 110/ 11ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ **ರೂ.585.95 ಲಕ್ಷ** ರೂಪಾಯಿಗಳು.

**3. ಯೋಜನೆಯ ಹೆಸರು:** ಬದಾಮಿ ತಾಲ್ಲೂಕಿನ **ನೀರಬೂದಿಹಾಳ** ಗ್ರಾಮದಲ್ಲಿ 1x10 ಎಂ.ವ್ಹಿ.ಎ., 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಾಣ ಹಾಗೂ ಪ್ರಸ್ತುತ 110 ಕೆ.ವ್ಹಿ. ಬಾಗಲಕೋಟೆ- ಲೋಕಾಪೂರ ಡಬಲ್ ಸರ್ಕ್ಯುಟ್ ಮಾರ್ಗದಿಂದ 110 ಕೆ.ವ್ಹಿ. ಲಿಲೊ ಮಾರ್ಗವನ್ನು ನಿರ್ಮಾಣ ಮಾಡಿ ಪ್ರಸ್ತಾವಿತ 110 ಕೆ.ವ್ಹಿ. ನೀರಬೂದಿಹಾಳ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು (ಮಾರ್ಗದ ಉದ್ದ 2.173 ಕಿ.ಮೀ.)

**ಪ್ರಮುಖ ಲಕ್ಷಣಗಳು:** ನೀರಬೂದಿಹಾಳ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು **ಗಂಗನ ಬೂದಿಹಾಳ, ಕೆರಕಲಮಟ್ಟಿ, ನೀರಬೂದಿಹಾಳ, ಕರಡಿಗುಡ್ಡ** ಮಾರ್ಗವಾಗಿ ಪ್ರಸ್ತಾವಿತ 110/ 11ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ **ರೂ.366.89 ಲಕ್ಷ** ರೂಪಾಯಿಗಳು.

**4. ಯೋಜನೆಯ ಹೆಸರು:** ಬಾಗಲಕೋಟೆ ತಾಲ್ಲೂಕಿನ **ಶಿಗೀಕೇರಿ** ಗ್ರಾಮದಲ್ಲಿ 2x10 ಎಂ.ವ್ಹಿ.ಎ., 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಾಣ ಹಾಗೂ ಪ್ರಸ್ತುತ 110 ಕೆ.ವ್ಹಿ. ಬ.ಬಾಗೇವಾಡಿ- ಬಾಗಲಕೋಟೆ ಡಬಲ್ ಸರ್ಕ್ಯುಟ್ ಮಾರ್ಗದಿಂದ 110 ಕೆ.ವ್ಹಿ. ಲಿಲೊ ಮಾರ್ಗವನ್ನು ನಿರ್ಮಾಣ ಮಾಡಿ ಪ್ರಸ್ತಾವಿತ 110 ಕೆ.ವ್ಹಿ. ಶಿಗೀಕೇರಿ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು (ಮಾರ್ಗದ ಉದ್ದ 0.924 ಕಿ.ಮೀ.)

**ಪ್ರಮುಖ ಲಕ್ಷಣಗಳು:** ಶಿಗೀಕೇರಿ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು **ಮುಚಖಂಡಿ ತಾಂಡಾ, ಬೇವಿನಮಟ್ಟಿ, ಶಿಗೀಕೇರಿ** ಮಾರ್ಗವಾಗಿ ಪ್ರಸ್ತಾವಿತ 110/ 11ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ **ರೂ.523.95 ಲಕ್ಷ** ರೂಪಾಯಿಗಳು.

**5. ಯೋಜನೆಯ ಹೆಸರು:** ಮುಧೋಳ ತಾಲ್ಲೂಕಿನ **ಸೈದಾಪೂರ** ಗ್ರಾಮದಲ್ಲಿ 1x10 ಎಂ.ವ್ಹಿ.ಎ., 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಾಣ ಹಾಗೂ ಪ್ರಸ್ತುತ 110 ಕೆ.ವ್ಹಿ. ಮಹಾಲಿಂಗಪುರ- ಘಟಪ್ರಭಾ ಸಿಂಗಲ್ ಸರ್ಕ್ಯುಟ್ ಮಾರ್ಗದಿಂದ 110 ಕೆ.ವ್ಹಿ. ಲಿಲೊ ಮಾರ್ಗವನ್ನು ನಿರ್ಮಾಣ ಮಾಡಿ ಪ್ರಸ್ತಾವಿತ 110 ಕೆ.ವ್ಹಿ. ಸೈದಾಪೂರ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು (ಮಾರ್ಗದ ಉದ್ದ 1.611 ಕಿ.ಮೀ.)

**ಪ್ರಮುಖ ಲಕ್ಷಣಗಳು:** ಸೈದಾಪೂರ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು **ಮದಭಾವಿ, ಸಂಗನಟ್ಟಿ ಸೈದಾಪೂರ** ಮಾರ್ಗವಾಗಿ ಪ್ರಸ್ತಾವಿತ 110/ 11ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ **ರೂ.341.74 ಲಕ್ಷ** ರೂಪಾಯಿಗಳು.

**6. ಯೋಜನೆಯ ಹೆಸರು:** ಬೀಳಗಿ ತಾಲ್ಲೂಕಿನ **ಶಿರಗುಪ್ಪಿ** ಗ್ರಾಮದಲ್ಲಿ 1x10 ಎಂ.ವ್ಹಿ.ಎ., 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರ ನಿರ್ಮಾಣ ಹಾಗೂ ಪ್ರಸ್ತುತ 110 ಕೆ.ವ್ಹಿ. ಕಾತರಕಿ- ಬೀಳಗಿ ಸಿಂಗಲ್ ಸರ್ಕ್ಯುಟ್ ಮಾರ್ಗದಿಂದ 110 ಕೆ.ವ್ಹಿ. ಲಿಲೊ ಮಾರ್ಗವನ್ನು ನಿರ್ಮಾಣ ಮಾಡಿ ಪ್ರಸ್ತಾವಿತ 110 ಕೆ.ವ್ಹಿ. ಶಿರಗುಪ್ಪಿ ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು (ಮಾರ್ಗದ ಉದ್ದ 2.792 ಕಿ.ಮೀ.)

**ಪ್ರಮುಖ ಲಕ್ಷಣಗಳು:** ಶಿಗೀಕೇರಿ ಗ್ರಾಮದ ಸುತ್ತಮುತ್ತ ವಿದ್ಯುತ್‌ಚ್ಛಕ್ತಿಯ ಸ್ಥಿತಿಯನ್ನು ಉತ್ತಮಗೊಳಿಸುವುದು. ಪ್ರಸ್ತಾವನೆ ಮಾಡಿದ ವಿದ್ಯುತ್ ಮಾರ್ಗವು **ಚಿಕ್ಕಸೌಂಶಿ, ಹಿರೇಸೌಂಶಿ, ಕುಂದರಗಿ, ಕುಂದರಗಿ ಆರ್.ಸಿ., ಶಿರಗುಪ್ಪಿ** ಮಾರ್ಗವಾಗಿ ಪ್ರಸ್ತಾವಿತ 110/ 11ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಜೋಡಿಸುವುದು.

ಯೋಜನೆಯ ಅಂದಾಜು ವೆಚ್ಚ **ರೂ.318.89 ಲಕ್ಷ** ರೂಪಾಯಿಗಳು.

ಮೇಲಿನ ಯೋಜನೆಯನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯ್ದೆ (1885ರ 13) ಭಾಗ 3ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ನಿಗಮವು ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಯೋಜನೆಯ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯ ನಿರ್ವಾಹಕ ಇಂಜಿನೀಯರರು (ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಬಾಗಲಕೋಟೆ ಇವರಿಗೆ ಈ ಪ್ರಕಟಣೆ ಪ್ರಕಟವಾದ ದಿನಾಂಕದಿಂದ ಎರಡು ತಿಂಗಳುಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಕಾರ್ಯನಿರ್ವಾಹಕ ಇಂಜಿನೀಯರ (ವಿ),
ಬೃಹತ್ ಕಾಮಗಾರಿ ವಿಭಾಗ,
ಕವಿಪ್ರನಿನಿ., ಬಾಗಲಕೋಟೆ.

ಪಿ.ಡಿ.57

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
## ಕಾರ್ಯನಿರ್ವಾಹಕ ಇಂಜಿನಿಯರ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಿಜಾಪುರ
## ಪ್ರಕಟಣೆ
### ಸಂಖ್ಯೆ: ಬಿಜೆಪಿ/ ಎಮ್.ಡಬ್ಲ್ಯೂ.ಡಿ./ ಇಇಇ/ ಕ 12/ 120, ದಿನಾಂಕ:22ನೇ ಮೇ, 2006

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು 1948ರ ಭಾರತೀಯ ವಿದ್ಯುತ್ ಸರಬರಾಜು ಅಧಿನಿಯಮದ ಅನುಬಂಧ 28 ಅನ್ವಯ ಈ ಕೆಳಗೆ ತಿಳಿಸಿದ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ಯೋಜನೆಗಳ ವಿವರಗಳನ್ನು ಪರವಾನಿಗೆ ಹೊಂದಿದ ಹಾಗೂ ಆಸಕ್ತರಾದ ಇತರೆ ಯಾವುದೇ ವ್ಯಕ್ತಿಯ ತಿಳುವಳಿಕೆಗಾಗಿ ಸದರಿ ಅಧಿನಿಯಮದ ಅನುಬಂಧ 29(1)ರ ಅನ್ವಯ ಈ ಮೂಲಕ ಪ್ರಕಟಿಸಿದೆ. ಯೋಜನೆಗಳ ವಿವರಗಳು ಈ ಕೆಳಗಿನಂತಿವೆ.

**1. ಯೋಜನೆಯ ಹೆಸರು:** ಇಂಡಿ 220 ಕೆವಿ ಉಪಕೇಂದ್ರ- ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕು, ಇಂಡಿ ರಿ.ಸ. 1011/ 1+2 ರಲ್ಲಿ 2x100 ಎಂ.ವಿ.ಎ., 220/ 110 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪಿಸುವುದು ಮತ್ತು ಬಸವನ ಬಾಗೇವಾಡಿ 220 ಕೆವಿ. ಉಪಕೇಂದ್ರದಿಂದ ಯೋಜಿತ ಇಂಡಿ ಉಪಕೇಂದ್ರಕ್ಕೆ 83.085 ಕಿ.ಮಿ. 220 ಕೆವಿ ಯೋಡಿ ಪ್ರಸರಣ ಮಾರ್ಗ ನಿರ್ಮಿಸುವುದು. ಪ್ರಮುಖ ಲಕ್ಷಣಗಳು: ಇಂಡಿ ಮತ್ತು ಸಿಂಧಗಿ ತಾಲ್ಲೂಕಿನ ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮತ್ತು ವೋಲ್ಟೇಜ್ ಸುಧಾರಣೆ 110 ಕೆವಿ ಇಂಡಿ, ಝಳಕಿ ಮತ್ತು ಯೋಜಿತ ಲಚ್ಯಾಣ, ಹಿರೇಬೇವನೂರ, ಅಥರ್ಗಾ ಮತ್ತು ದೇವರ ಹಿಪ್ಪರಗಿ ಉಪಕೇಂದ್ರಗಳಿಗೆ ವಿದ್ಯುತ್ ಸರಬರಾಜು ಒದಗಿಸುವುದು. ಹಾದು ಹೋಗುವ ಪ್ರದೇಶ: ಬಸವನ ಬಾಗೇವಾಡಿ, ನಂದ್ಯಾಳ, ಹತ್ತರಕಿಹಾಳ, ಇಸ್ಲಾಂಪುರ ತಾಂಡಾ, ಉಕ್ಕಲಿ, ಹೆಗಡಿಹಾಳ, ಉತ್ನಾಳ, ಕತ್ನಳ್ಳಿ, ಬುರಾಣಪುರ, ಅಲಿಯಾಬಾದ ತಾಂಡಾ, ದ್ಯಾಬೇರಿ, ನಾಗಠಾಣ, ಜಂಬಗಿ, ಅಥರ್ಗಾ, ಮಿಂಚಿನಾಳ, ರಾಜನಾಳ, ತಡವಲಗಾ, ಲಿಂಗದಳ್ಳಿ, ನಿಂಬಾಳ, ಹಂಜಗಿ, ಹಂಜಗಿ ತಾಂಡಾ, ಕೆಸರಾಳ ತಾಂಡಾ, ಇಂಡಿ. ಯೋಜನೆ ಅಂದಾಜು ವೆಚ್ಚ: ರೂ.5598.30 ಲಕ್ಷಗಳು.

**2. ಯೋಜನೆಯ ಹೆಸರು:** ಬಿಜಾಪುರ 220 ಕೆವಿ ಉಪಕೇಂದ್ರ- ಬಿಜಾಪುರ ಜಿಲ್ಲೆ ಬಿಜಾಪುರ ತಾಲ್ಲೂಕು, ಐನಾಪುರ ರಿ.ಸ. 38/ 1+2 ರಲ್ಲಿ 2x100 ಎಂ.ವಿ.ಎ., 220/ 110 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪಿಸುವುದು ಮತ್ತು ಬಸವನ ಬಾಗೇವಾಡಿ 220 ಕೆವಿ. ಉಪಕೇಂದ್ರದಿಂದ ಯೋಜಿತ ಇಂಡಿ ಉಪಕೇಂದ್ರದ ಜೋಡಿ ಪ್ರಸರಣ ಮಾರ್ಗಕ್ಕೆ 5.881 ಲಿಲೋ 220 ಕೆವಿ ಜೋಡಿ ಪ್ರಸರಣ ಮಾರ್ಗ ನಿರ್ಮಿಸುವುದು. ಪ್ರಮುಖ ಲಕ್ಷಣಗಳು: ಬಿಜಾಪುರ ಹಾಗೂ ಸುತ್ತಲಿನ ಬಿಜಾಪುರ ತಾಲ್ಲೂಕಿನ ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮತ್ತು ವೋಲ್ಟೇಜ ಸುಧಾರಣೆ, 110 ಕೆವಿ ಬಿಜಾಪುರ, ಕೆಐಎಡಿಬಿ ಬಿಜಾಪುರ, ತಿಕೋಟ ಮತ್ತು ಯೋಜಿತ ತೊರವಿ (ಅಲ್-ಅಮೀನ್- ಬಿಜಾಪುರ ಸಿಟಿ), ಭುತನಾಳ ಉಪಕೇಂದ್ರಗಳಿಗೆ ವಿದ್ಯುತ್ ಸರಬರಾಜು ಒದಗಿಸುವುದು. ಹಾದು ಹೋಗುವ ಪ್ರದೇಶ: ಐನಾಪುರ, ಉಕುಮನಾಳ, ಬಿಜಾಪುರ ಯೋಜನೆ ಅಂದಾಜು ವೆಚ್ಚ: ರೂ.2810.29 ಲಕ್ಷಗಳು.

**3. ಯೋಜನೆಯ ಹೆಸರು:** ಭೂತನಾಳದಲ್ಲಿನ 33/ 11 ಕೆವಿ ಉಪಕೇಂದ್ರವನ್ನು 2x10 ಎಂ.ವಿ.ಎ., 110/ 11 ಕೆವಿ. 110 ಕೆವಿ ವಿದ್ಯುತ್ ಉಪಕೇಂದ್ರಕ್ಕೆ ಮೇಲ್ದರ್ಜೆಗೆ ಏರಿಸುವುದು ಮತ್ತು ಕೆಐಎಡಿಬಿ ಬಿಜಾಪುರದಿಂದ ತಿಕೋಟಾ 110 ಕೆವಿ ಒಂಟಿ ಪ್ರಸರಣ ಮಾರ್ಗಕ್ಕೆ 1.319 ಕಿ.ಮಿ. 110 ಕೆವಿ ಲಿಲೋ ಪ್ರಸರಣ ಮಾರ್ಗ ನಿರ್ಮಿಸುವುದು. ಪ್ರಮುಖ ಲಕ್ಷಗಳು: ಭೂತನಾಳ ಹಾಗೂ ಸುತ್ತಲಿನ ಬಿಜಾಪುರದಲ್ಲಿನ ವಿದ್ಯುತ್ ಸರಬರಾಜು ಮತ್ತು ವೋಲ್ಟೇಜ ಸುಧಾರಣೆ, ಹಾದು ಹೋಗುವ ಪ್ರದೇಶ: ಭೂತನಾಳದಲ್ಲಿನ ಗೋಶಾಲೆ, ಬಿಜಾಪುರ ನೀರು ಸರಬರಾಜು ಸ್ಥಾವರ, ಭೂತನಾಳ, ಯೋಜನೆ ಅಂದಾಜು ವೆಚ್ಚ: ರೂ.519.54 ಲಕ್ಷಗಳು.

**4. ಯೋಜನೆಯ ಹೆಸರು:** ಹಿರೇಬೇವನೂರ 110 ಕೆವಿ ಉಪಕೇಂದ್ರ- ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು ಹಿರೇಬೇವನೂರ ರಿ.ಸ. 275/ 1ರಲ್ಲಿ 1x10 ಎಂ.ವಿ.ಎ., 110/ 11 ಕೆವಿ. 110 ಕೆವಿ ವಿದ್ಯುತ್ ಉಪಕೇಂದ್ರಕ್ಕೆ ಸ್ಥಾಪಿಸುವುದು ಮತ್ತು ಇಂಡಿ 220 ಕೆವಿ ಉಪಕೇಂದ್ರದಿಂದ ಲೊಕೆಶನ್ 9 (ಬೈಫರ್ಕೆಶನ್ ಗೋಪುರ) ದಿಂದ ಹಿರೇಬೇವನೂರ 110 ಕೆವಿ ಉಪಕೇಂದ್ರಕ್ಕೆ 14.172 ಕಿ.ಮಿ. ಜೋಡಿ ಗೋಪುರದ ಮೇಲೆ 110 ಕೆವಿ ಒಂಟಿ ಪ್ರಸರಣ ಮಾರ್ಗ ನಿರ್ಮಿಸುವುದು. ಪ್ರಮುಖ ಲಕ್ಷಣಗಳು: ಹಿರೇಬೇವನೂರ ಹಾಗೂ ಸುತ್ತಲಿನ ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮತ್ತು ವೋಲ್ಟೇಜ ಸುಧಾರಣೆ, ಹಾದು ಹೋಗುವ ಪ್ರದೇಶ: ಇಂಡಿ, ಮಾವಿನಹಳ್ಳಿ, ಇಂಗಳಗಿ, ಆಳೂರ, ಭುಯ್ಯಾರ ಹಾಗೂ ಹಿರೇಬೇವನೂರ ಯೋಜನೆ ಅಂದಾಜು ವೆಚ್ಚ: ರೂ.513.92 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ಮೇಲ್ಕಂಡ ಯೋಜನೆಗಳನ್ನು ಕಾರ್ಯಗತಗೊಳಿಸಲು 2003ರ ಭಾರತೀಯ ವಿದ್ಯುತ್ ಅಧಿನಿಯಮದ ಅನುಬಂದ 164ರ ಪ್ರಕಾರ 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮದ ಭಾಗ III ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಮೇಲ್ಕಾಣಿಸಿದ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಈ ಪ್ರಕಟಣೆಯು ಪ್ರಕಟವಾದ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯನಿರ್ವಾಹಕ ಇಂಜಿನಿಯರ (ವಿ), ಬೃಹತ್ ಕಾಮಗಾರಿ ವಿಭಾಗ, ಬಿಜಾಪುರ ಇವರಿಗೆ ಕಳುಹಿಸುವುದು. ಅವಧಿಗೆ ಮೀರಿ ತಲುಪಿದ ಯಾವುದೇ ಆಕ್ಷೇಪಣೆಗಳನ್ನು ನಿಗಮವು ಪರಿಗಣಿಸುವುದಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ (ವಿ),
ಬೃಹತ್ ಕಾಮಗಾರಿ ವಿಭಾಗ,
ಕವಿಪ್ರನಿನಿ., ಬಿಜಾಪುರ.

ಪಿ.ಡಿ.58

## ನಿರ್ದೇಶಕರ ಕಛೇರಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಬೈತ್‌ಖೋಲ್, ಕಾರವಾರ-581302

### ಅಧಿಸೂಚನೆ

### ಕ್ರಮ ಸಂಖ್ಯೆ: ಬಂಒಜಸಾ/ 43/ ಪಿಎಎಸ್/ 2002, ದಿನಾಂಕ:8ನೇ ಫೆಬ್ರವರಿ, 2006

ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರ ಅಧಿನಿಯಮ ಸಂಖ್ಯೆ: 22)ರ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶನಾಲಯ, ಕಾರವಾರಕ್ಕೆ ಸಂಬಂಧಿಸಿದಂತೆ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಈ ಕೆಳಗಿನ ಅಧಿಕಾರಿಗಳನ್ನು **"ಸಾರ್ವಜನಿಕ ಮಾಹಿತಿ ಅಧಿಕಾರಿಗಳು"** ಎಂದು ನೇಮಕ ಮಾಡಲಾಗಿದೆ.

1. ಬಂದರು ಅಭಿಯಂತರು, ಕಾರವಾರ.
2. ಜಲಮೋಜಣಿದಾರ, ಕಾರವಾರ.

ಮಾಹಿತಿ ಹಕ್ಕು ಅಧಿನಿಯಮ 2005ರ (ಕೇಂದ್ರ ಅಧಿನಿಯಮ ಸಂಖ್ಯೆ 22)ರ ಸೆಕ್ಷನ್ 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ನಿರ್ದೇಶನಾಲಯ ಕಾರವಾರಕ್ಕೆ ಸಂಬಂಧಿಸಿದಂತೆ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಈ ಕೆಳಗಿನ ಅಧಿಕಾರಿಗಳನ್ನು **"ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳು"** ಎಂದು ನೇಮಕ ಮಾಡಲಾಗಿದೆ.

1. ಆಡಳಿತ ಸಹಾಯಕರು, ಕಾರವಾರ.
2. ಕಡವು ಅಧಿಕಾರಿ, ಕಾರವಾರ.

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **"ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕಾರವಾರ"** ಇವರನ್ನು ಮೇಲ್ಮನವಿ ಪ್ರಾಧಿಕಾರ ಎಂದು ನೇಮಕ ಮಾಡಲಾಗಿದೆ.

ನಿರ್ದೇಶಕರು,
ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಕಾರವಾರ.

ಪಿ.ಆರ್.486

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

### ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ: ಸಿಆರ್ 62, 2005-06, ದಿನಾಂಕ:7ನೇ ಫೆಬ್ರವರಿ, 2006

**ವಿಷಯ:** ಕಾರ್ಯವನ್ನು ನಿರ್ವಹಿಸದಂತೆ ಸ್ಥಗಿತಗೊಂಡಿರುವ ಬೇವಿನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗೌರಿಬಿದನೂರು ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಇವರ ಪತ್ರದ ಸಂಖ್ಯೆ: ಸನಿ:48: ಸಮಾಪನೆ: ಸಿಆರ್.35: 2005-06, ದಿನಾಂಕ: 03.02.2006.

**ಪ್ರಸ್ತಾವನೆ:**

ಬೇವಿನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ, ಈ ಸಂಘವು ಸ್ಥಾಪನೆಗೊಂಡ ನಂತರ ಕೆಲವು ವರ್ಷಗಳು ಮಾತ್ರ ತನ್ನ ಚಟುವಟಿಕೆಯನ್ನು ನಿರ್ವಹಿಸಿ ನಂತರ ಯಾವುದೇ ಚಟುವಟಿಕೆಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಕಾರಣ ಸದರಿ ಸಂಘವನ್ನು ಪುನಶ್ಚೇತನ ಮಾಡುವುದಕ್ಕೆ ಸಾಧ್ಯತೆ ಇಲ್ಲದಿರುವುದರಿಂದ ಈ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ ಅಥವಾ ಸರ್ಕಾರಕ್ಕಾಗಲಿ ಯಾವುದೇ ಉಪಯೋಗ ಇಲ್ಲದಿರುವುದರಿಂದ ಸದರಿ ಸಂಘವನ್ನು ಋಣಸಮಾಪನೆಗೊಳಿಸಿ, ಈ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿ, ಗೌರಿಬಿದನೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆದುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂದಕರು, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಸಂಘವನ್ನು ಋಣ ಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಬೇವಿನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ, ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿ, ಗೌರಿಬಿದನೂರು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳಿಗೆ ಈ ಕೂಡಲೇ ಸಂಘದ ಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗಾಗಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 07.02.2006ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.488

## ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

**ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ: ಸಿಆರ್ 63, 2005-06, ದಿನಾಂಕ:7ನೇ ಫೆಬ್ರವರಿ, 2006**

**ವಿಷಯ:** ಕಾರ್ಯವನ್ನು ನಿರ್ವಹಿಸದಂತೆ ಸ್ಥಗಿತಗೊಂಡಿರುವ ಲೇಬರ್ ಕಾಂಟ್ರಾಕ್ಟ್ ಸಹಕಾರ ಸಂಘ ನಿ., ಗೌರಿಬಿದನೂರು ಈ ಸಹಕಾರ ಸಂಘವನ್ನು ಋಣಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಇವರ ಪತ್ರದ ಸಂಖ್ಯೆ: ಸನಿ:48: ಸಮಾಪನೆ: ಸಿಆರ್.35: 2005-06, ದಿನಾಂಕ: 03.02.2006.

**ಪ್ರಸ್ತಾವನೆ:**

ಲೇಬರ್ ಕಾಂಟ್ರಾಕ್ಟ್, ಸಹಕಾರ ಸಂಘ ನಿ., ಗೌರಿಬಿದನೂರು, ಕೋಲಾರ ಜಿಲ್ಲೆ, ಈ ಸಂಘವು ಸ್ಥಾಪನೆಗೊಂಡ ನಂತರ ಕೆಲವು ವರ್ಷಗಳು ಮಾತ್ರ ತನ್ನ ಚಟುವಟಿಕೆಯನ್ನು ನಿರ್ವಹಿಸಿ ನಂತರ ಯಾವುದೇ ಚಟುವಟಿಕೆಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಕಾರಣ ಸದರಿ ಸಂಘವನ್ನು ಪುನಶ್ಚೇತನ ಮಾಡುವುದಕ್ಕೆ ಸಾಧ್ಯತೆ ಇಲ್ಲದಿರುವುದರಿಂದ ಈ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ ಅಥವಾ ಸರ್ಕಾರಕ್ಕಾಗಲಿ ಯಾವುದೇ ಉಪಯೋಗ ಇಲ್ಲದಿರುವುದರಿಂದ ಸದರಿ ಸಂಘವನ್ನು ಋಣಸಮಾಪನೆಗೊಳಿಸಿ, ಈ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿ, ಗೌರಿಬಿದನೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆದುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂದಕರು, ಚಿಕ್ಕಬಳ್ಳಾಪುರ ಇವರ ಶಿಫಾರಸ್ಸನ್ನು ಪರಿಗಣಿಸಿ ಸಂಘವನ್ನು ಋಣ ಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಪ್ರಯೋಗಿಸಿ ಡಿ.ಸಿ. ನಾಗರಾಜಯ್ಯ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಲೇಬರ್ ಕಾಂಟ್ರಾಕ್ಟ್ ಸಹಕಾರ ಸಂಘ ನಿ., ಗೌರಿಬಿದನೂರು, ಕೋಲಾರ ಜಿಲ್ಲೆ, ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿ, ಗೌರಿಬಿದನೂರು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳಿಗೆ ಈ ಕೂಡಲೇ ಸಂಘದ ಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗಾಗಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 07.02.2006ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.489

## ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ಕಾರ್ಯಾಲಯ

**ಸಂಖ್ಯೆ: ಡಿಆರ್‌ಕೆ: ಎಲ್‌ಕ್ಯೂಡಿ: ಸಿಆರ್-39 08/ 2005-06, ದಿನಾಂಕ:7ನೇ ಫೆಬ್ರವರಿ, 2006**

**ವಿಷಯ:** ಕಾರ್ಯವನ್ನು ನಿರ್ವಹಿಸದಂತೆ ಸ್ಥಗಿತಗೊಂಡಿರುವ ಕೃಷಿ ಹುಟ್ಟುವಳಿಗಳ ಸಂಸ್ಕರಣ ಹಾಗೂ ಮಾರಾಟ ಸಹಕಾರ ಸಂಘ ನಿ., ಕಣಜೇನಹಳ್ಳಿ, ಚಿಕ್ಕಬಳ್ಳಾಪುರ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಬಳ್ಳಾಪುರ ಉಪವಿಭಾಗ, ಇವರ ಪತ್ರದ ಸಂಖ್ಯೆ: ಸನಿ:48: ಸಮಾಪನೆ: ಸಿಆರ್.35: 2005-06, ದಿನಾಂಕ: 03.02.2006.

**ಪ್ರಸ್ತಾವನೆ:**

ಕೃಷಿ ಹುಟ್ಟುವಳಿಗಳ ಸಂಸ್ಕರಣ ಹಾಗೂ ಮಾರಾಟ ಸಹಕಾರ ಸಂಘ ನಿ., ಕಣಜೇನಹಳ್ಳಿ, ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಜಿಲ್ಲೆ, ಈ ಸಂಘವು ಸ್ಥಾಪನೆಗೊಂಡ ನಂತರ ಕಾರ್ಯಾರಂಭ ಮಾಡದೇ ಯಾವುದೇ ರೀತಿಯ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಕಾರಣ

